# ಕೊಡಗು ಸಂಗಾತಿ


ಮೇ 1 ರಿಂದ 31, 2002

ಪಾಕ್ಷಿಕ ಪತ್ರಿಕೆ

(ಪಗ್ಗ 19-31, ಬೇಶ 1-18)

ದೊಡ್ಡಣ್ಣ ಬಿಲ್ಡಿಂಗ್ಸ್, ಹುಣಸೂರು ರಸ್ತೆ, ಹಿನ್‌ಕಲ್ ಅಂಚೆ, ಮೈಸೂರು - ೫೭೦ ೦೧೭

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಗನ್ನಡ ಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 6 ಸಂಚಿಕೆ : 3-4 ಪುಟಗಳು : 24 ಬೆಲೆ ರೂ. : 12-00




ಲೇಖನ : ಒಳಪುಟದಲ್ಲಿ.

## ಕೊಡಗಿಗೆ ಸಂದ ರಾಷ್ಟ್ರೀಯ ಮನ್ನಣೆ ಶ್ರಮ ಭೂಷಣ ಪ್ರಶಸ್ತಿ ವಿಜೇತ:-ನಂಗಾರು ಡಿ. ಮೋನಪ್ಪ

## ಓದುಗರು ತಪ್ಪದೆ ಗಮನಿಸಿ !

ನೀವ್ ಸಂಗಾತಿಗೆ M.O. ಮಾಡ್ಕನ ನಿಮ್ಮ ವಿಳಾಸನ M.O ಫಾರಂ ಹಿಂದೆ ಪೂರ್ತಿಯಾಗಿ ಬರಿಯಕು. ನೀವ್ ಕಳ್ಸಿದ ಚಂದ ಹಣಕ್ಕೆ ತಕ್ಕ ರಶೀತಿ ಬಾತಿಲ್ಲೆತ್ತೇಳಿರೆ ನೇರ್ಸಾಗಿ ನಮಿಗೆ ತಿಳ್ಸಕ್ಕ್. ಅಲ್ಲಿ ಇಲ್ಲಿ ಎಲ್ಲಿಸ ತಿಳ್ಸೇಡಿ. ಸಾಮಾನ್ಯವಾಗಿ ನಾವ್ ಪತ್ರಿಕೆ ಒಳ್ಗಡೆ ಜ್ಞಾಪನ ಚೀಟಿನ ಹಾಕಿದ್ದವೆ.

ಲೇಖನ ಕಳ್ಸಿಕ್ಕನ ಅಕ್ಷರಗ ಲಾಯಿಕ ಇರ್‍ಲಿ. ಉರ್‍ರ್ಟು ಇರ್‍ಲಿ. ಗೀಚಿ ಬರೀಬೇಡಿ. ನಮಿಗೆ ಎಡಿಟಿಂಗ್ ಮಾಡಿಕೆ ಬಹಳ ಕಷ್ಟ ಆದೆ. ಅರೆಗನ್ನಡ ಭಾಷೆ ಬರವಣಿಗೆ ಲಾಯ್ಕಾಗಿ ಇದ್ದ್ ಮೆಲ್ಮಟ್ಟದಾಗಿರಕ್ಕು. ಹೆಚ್ಚೆಚ್ಚ್ ನಡುಗನ್ನಡ ಪದಗ ಮತ್ತ್ ಅರೆಗನ್ನಡ ಬಾಸೆ ಪದಗ ಇರ್‍ಲಿ. ಇಂಗ್ಲೀಷ್, ಕನ್ನಡ ಪದಬಳಕೆ ಆದಷ್ಟ್ ಕಮ್ಮಿ ಇದ್ದ್, ಲೇಖನ ಪೂರ್‍ಲ್ ಕಾಣಲಿ. ಕೈಬರಹ ನೀಟಾಗಿ ಇರ್‍ಲಿ. ಲೇಖನ ತಿಂಗಳ 20 ರ ಒಳಗೆ ಬರಕ್ಕು. ಪತ್ರಿಕೆಗೆ ಯಾರ್ ಬೇಕಾದರ್ ಬರಿಯಕ್ಕ್.

-ಸಂಪಾದಕ.

## ಗೌಡ ಬರಹಗಾರರ ವೇದಿಕೆ ಅಸ್ತಿತ್ವಕ್ಕೆ

ಗೌಡ ಜನಾಂಗದಲ್ಲಿರುವ ಯುವ ಬರಹಗಾರರಿಗೆ ಪ್ರೋತ್ಸಾಹ ನೀಡಿ, ಸೂಕ್ತ ವೇದಿಕೆ ಕಲ್ಪಿಸಿಕೊಡುವ ಉದ್ದೇಶದಿಂದ ಗೌಡ ಬರಹಗಾರರ ವೇದಿಕೆ ಮೇ ೧೯ ರಂದು ಅಸ್ಥಿತ್ವಕ್ಕೆ ಬರಲಿದೆ. ಅಂದು ಮೈಸೂರಿನ ಕೊಡಗು ಗೌಡ ವಿದ್ಯಾಸಂಘ, ಜಯಲಕ್ಷ್ಮೀಪುರಂ ಇಲ್ಲಿ ಈ ಸಂಘಟನೆಯ ಸಮಿತಿ ರಚನೆ ಮತ್ತು ಉದ್ಘಾಟನಾ ಸಮಾರಂಭ ೧೧-೦೦ ಗಂಟೆಗೆ ನಡೆಯಲಿದೆ. ಗೌಡ ಬರಹಗಾರರು, ಸಾಹಿತಿಗಳು, ಹಿತೈಷಿಗಳು ಅಭಿಮಾನಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಬೇಕಾಗಿ ವಿನಂತಿಸಲಾಗಿದೆ.

**ಹೆಚ್ಚಿನ ವಿವರಕ್ಕೆ ಸಂಪರ್ಕಿಸಬೇಕಾದ ದೂರವಾಣಿ ಸಂಖ್ಯೆ: 0821 / 404290**

## ಗಮನಿಸಿ ಮಾರಾಟಕ್ಕಿದೆ

ಉತ್ತಮ ತಳಿಯ ಅಲ್‌ಶೆಸನ್ (ಜರ್ಮನ್ ಶೆಪರ್ಡ್) ನಾಯಿಮರಿಗಳು ಮಾರಾಟಕ್ಕಿದೆ. ಆಸಕ್ತರು ಸಂಪರ್ಕಿಸಿ.

**ಕೂಡಲೇ - 0821-404290**

## ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡರ ಮದುವೆ ಕ್ರಮ.

### (ಮೊಟ್ಟ ಮೊದಲ ಆಡಿಯೋ ಕ್ಯಾಸೆಟ್ - ರಚನೆ : ಪೂಜಾರಿ ಪೂವಯ್ಯ)

ಬೆಂಗಳೂರು ನಿವಾಸಿ ಪೂಜಾರಿ ಪೂವಯ್ಯನವರು "ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡರ ಮದುವೆ ಕ್ರಮ" ಎಂಬ ಆಡಿಯೋ ಕ್ಯಾಸೆಟ್ ತಯಾರಿಸಿರುವರು. ಸಂಕ್ಷಿಪ್ತವಾಗಿ ಶುರುವಿನಿಂದ ಕೊನೆಯವರೆಗೆ ಪದ್ಧತಿಯನ್ನು ಹಾಡು ಸೋಬಾನೆಗಳೊಂದಿಗೆ ಅಳವಡಿಸಿದ್ದಾರೆ. ಹಿರಿಯರ ಮಾತು, ಯುವಕರ ತಮಾಷೆ, ಸಣ್ಣ ಮಕ್ಕಳ ಚೆಲ್ಲಾಟದ ಮಾತುಗಳು ಇವೆ. ಪ್ರತಿಯೊಂದು ವಿಷಯವನ್ನು ಮನಸ್ಸಿಟ್ಟು ಕೇಳಿದರೆ, ಪದ್ಧತಿ ಗೊತ್ತಿರುವವರಿಗೆ ಅರ್ಥಗರ್ಭಿತವಾಗಿದೆ. ಪೂವಯ್ಯನವರು ನಮ್ಮವರೇ ಬರೆದ ಹಲವು ಪುಸ್ತಕಗಳನ್ನು ಸಂಶೋಧನೆ ಮಾಡಿರುವರು. ಸರಿಯಾದ ಅನುಕೂಲತೆಗಳು ದೊರಕದ ಕಾರಣ ಅವರೊಬ್ಬರದೇ ಎಲ್ಲಾ ಸಂಭಾಷಣೆ, ಹಾಡು ಪದ ಸೋಬಾನೆ, ಬರೆದದ್ದೂ ಅವರೆ. ಕೇಳುವವರಿಗೆ ಪದ್ಧತಿಗಳನ್ನು ಮಾತ್ರ ಕೇಳಿ ಕಲಿಯುವವರಿಗೆ ಬೋರ್ ಆಗದ ಹಾಗೆ ತಮಾಷೆ ಮಾತುಗಳು ಇವೆ. ಕೆಲವು ವಾಕ್ಯಗಳು ಕನ್ನಡದಲ್ಲಿವೆ. ಮಿಕ್ಕಿದ್ದೆಲ್ಲಾ ಅರೆಗನ್ನಡ. ಇದರಲ್ಲಿ ತಪ್ಪುಗಳಿದ್ದರೆ ಮತ್ತು ಇದನ್ನು ಸರಿಯಾದ ಕ್ರಮದಲ್ಲಿ, ವಿಡಿಯೊ ಕ್ಯಾಸೆಟ್ ಆಗಿ ಸಹ ತಯಾರಿಸುವವರು ಮುಂದೆ ಬರಬೇಕೆಂದು ಪೂವಯ್ಯನವರು ಈ ಕೇಸೆಟ್‌ನ ಮುಖಾಂತರ ಕೇಳಿಕೊಂಡಿರುವರು. ನಮ್ಮ ಜನಾಂಗದ ಪದ್ಧತಿಯನ್ನು ಸಂಕ್ಷಿಪ್ತವಾಗಿ ವರ್ಣಿಸಿ ಹೊರಬಂದಿರುವ ಆಡಿಯೊ ಕೇಸೆಟ್ ಇದೇ ಮೊದಲನೆಯದಾಗಿದೆ. ಈ ಕೇಸೆಟ್ ಒಂದುವರೆ ತಾಸು ಓಡುವುದು. ಹೆಚ್ಚಿನ ವಿವರಗಳಿಗೆ ಈ ಕೆಳಗಿನ ವಿಳಾಸದಾರರನ್ನೂ ಸಂಪರ್ಕಿಸಿ.

- ಪೂಜಾರಿ ಪೂವಯ್ಯ

13, Ist -A ಮೈನ್ ರಸ್ತೆ, ಗಂಗಾನಗರ ಎಕ್ಸ್‌ಟೆನ್‌ಷನ್,
ಬೆಂಗಳೂರು- 560 032

**ಸಂಪರ್ಕಿಸಿ: Ph: 080 / 3330454**



ಗುತ್ತಿ ಮುಂಡನ ಸೋಮಯ್ಯ

ಜನನ: 1938 | **ಚಿರಸ್ಮರಣೆ** | ಮರಣ: 8-5-2000

ನೀವು ನಮ್ಮನ್ನಗಲಿ ಒಂದು ವರ್ಷ ಕಳೆದರೂ ನಿಮ್ಮ ಸವಿನೆನಪು ನಮ್ಮೆಲ್ಲರಲ್ಲಿ ಹಚ್ಚ ಹಸಿರಾಗಿ ಉಳಿದಿದೆ. ನಿಮ್ಮ ಆದರ್ಶ ಗುಣಗಳು ನಮಗಾಗಿ ಮತ್ತು ಜನರಿಗಾಗಿ. ನಮ್ಮೆಲ್ಲರ ನೆನಪುಗಳಲ್ಲಿ ನಿಮ್ಮ ಆತ್ಮಕ್ಕೆ ಆ ಭಗವಂತನು ಸದಾ ಚಿರಶಾಂತಿ ನೀಡಲೆಂದು ನಾವೆಲ್ಲರೂ ದೇವರಲ್ಲಿ ಪ್ರಾರ್ಥಿಸುತ್ತೇವೆ.

ತಂಗಿ: ಪಟ್ಟಡ ಪೂವಮ್ಮ ಜಯರಾಮ್
ಬಾವ: ಪಟ್ಟಡ ನಂಜುಂಡ ಜಯರಾಮ್
ಮಕ್ಕಳು: ದಿವ್ಯ, ದೀಪಕ್, ಉಷಾ

ತಿದ್ದುಪಡಿ :- ಸಂಪುಟ -6, ಸಂಚಿಕೆ 1-2, ಪುಟ 5 ರಲ್ಲಿ ವೈಶಿಷ್ಟ್ಯಪೂರ್ಣ ಸಂಭ್ರಮದ ಯುಗಾದಿ ಎಂಬ ಲೇಖನದ ಲೇಖಕರು ಮೇಲುಕೋಟೆ ವಿ. ಎನ್. ಗೌಡ ಎಂದು ಆಗಬೇಕಿತ್ತು. ಮುದ್ರಣ ದೋಷದಿಂದ ಸಂಗಾತಿ ಎಂದು ಪ್ರಕಟಗೊಂಡಿದ್ದಕ್ಕೆ ವಿಷಾದಿಸುತ್ತೇವೆ.



# 2002, ಮೇ 1 ರಿಂದ 31 ರ ತನಕ

## ಒಳನೋಟ 


| ಕನ್ನಡ ವಿಭಾಗ | ಲೇಖಕರು | ಪುಟಗಳು |
|---|---|---|
| ಛಾಪಾ ಕಾಗದ ಹಗರಣ ಮತ್ತು ನಿಷೇಧ: | - ಸಂಪಾದಕೀಯ | 02 |
| ಕೊಡಗಿಗೆ ಸಂದ ರಾಷ್ಟ್ರೀಯ ಮನ್ನಣೆ: | - ಯು. ಸುಬ್ರಾಯ ಗೌಡ | 03 |
| ಸಂಸ್ಕೃತಿ ಮರೆತು ಅಪಾರ ಆಡಂಬರದ ಕಡೆಗೆ ನಮ್ಮ ಮದುವೆಗಳು! | - ಪಟ್ಟಡ ಶಿವಕುಮಾರ್ | 04 |
| ಧಾರವಾಡ ಜಿಲ್ಲೆಯ ಪ್ರಧಾನ ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತಿ ಹೊಂದಿದ ಕೆ. ಬಾಲಕೃಷ್ಣ. | - ಹುದೇರಿ ಟೀನಾ ಸೋಮಣ್ಣ | 05 |
| ರೈಲಿನಿಂದ ಬಿದ್ದು ಕೊಡಗಿನ ಯೋಧನ ದುರ್ಮರಣ: | - ಬಿ. ಎಂ. ಲವಕುಮಾರ | 07 |
| "ಬ್ಯಾರಿ ಮುಸ್ಲಿಮರು" ಒಂದು ಸಮೂಹ ಶೋಧ ಕೃತಿ | - ಎಂ. ಇ. ಆಶ್ರಫ್ ಮುಸ್ಲಿಯಾರ್ | 08 |
| ಸಂಸ್ಕೃತಿ ಉಳಿವಿಗೆ ಗೌಡ ಜನಾಂಗ ಒಗ್ಗೂಡಬೇಕಿದೆ. | - ಸಂಗಾತಿ | 09 |
| ನಮ್ಮ ಜನ್ಮ ಭೂಮಿ ಸ್ವರ್ಗ: ನಮ್ಮ ಸಂಸ್ಕೃತಿ ಜ್ಯೋತಿ | - ಚೇಂದ್ರಿಮಾಡ ಗ. ಮುತ್ತಪ್ಪ | 10 |
| ಹಿಂದುಗಳಿಗೆ ದ್ವಿತೀಯ ದರ್ಜೆ ಪ್ರಜೆ ಸ್ಥಾನ | - ಸಂಗಾತಿ | 11 |
| ಲೆಬನಾನ್‌ನಲ್ಲಿ ವಿಶ್ವಶಾಂತಿ ಪಾಲನಾ ಪಡೆ: | - ಐ. ಸಿ. ಲವಕುಮಾರ್ | 12 |
| ನಿರಭಿಮಾನಿ ಕನ್ನಡಿಗರಿಂದ ಭಾಷೆಗೆ ಕುತ್ತು: ಶಿವಳ್ಳಿ ಕೆಂಪೇಗೌಡ | - ಸಂಗಾತಿ | 14 |
| ಡಾಕ್ಟರೇಟ್ ಪುರಸ್ಕಾರ | - ಸಂಗಾತಿ | 19 |
| ಗೋಕರ್ಣದಲ್ಲಿ ಹವ್ಯಕ ಜನ ಜಾಗೃತಿ ವಿಶ್ವ ಸಮ್ಮೇಳನ | - ಸಂಗಾತಿ | 19 |
| ಅನುಕರಣೀಯ ವ್ಯಕ್ತಿ ದಿ ವಳಂಬ್ರ ಎಲ್ಯಣ ಗೌಡ | - ಶ್ರೀಮತಿ ಲೋಕೇಶ್ವರಿ ವಿನಯಚಂದ್ರ | 20 |
| **ಅರೆಭಾಷಿಕ ವಿಭಾಗ:** | | |
| ನೈಜ ಘಟನೆ: ಅಣ್ಣನ ಪ್ರೀತಿ | - ಎಡಿಕೇರಿ ಸುದರ್ಶನ್ | 13 |
| ಕಳುವಾದ ಕಿಡ್ನಿ! | - ಬಾಚರಣಿಯಂಡ ಅಪ್ಪಣ್ಣ | 16 |
| ಹೆಲ್ಮೆಟ್ ಎಂದರೇನು? | - ಕುದುಪಜೆ ಬಸಪ್ಪ | 17 |
| ವಡ್ಸ್‌ಕಥೆ | - ಕೆ. ಇಂದಿರಾ ದೇವಯ್ಯ | 17 |
| ದೊಡ್ಡ ಗೇಟ್ | - ಬಾರನ ಮಮತ ಉಲ್ಲಾಸ್ | 19 |



| | |
|---|---|
| **ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ** | **ಕೊಡಗು ಸಂಗಾತಿ,** 35, "ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು-12. **ಫೋನ್ : 0821/404290** |
| **ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಹ್ನೆ, ಹಸೆಮಣೆ/ ಶುಭಾಶಯ ಕಾರ್ಡ್ಸ್/ ಕ್ಯಾಸೆಟ್ಸ್ ಕೀ ಚೈನ್ ಲಭ್ಯ** | **ಬೈತಡ್ಕ ಜಾನಕಿ ಬೆಳ್ಯಪ್ಪ,** ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/228047**<br>**ಚೆರಿಯಮನೆ ರಮೇಶ್,** C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, **ಫೋನ್:** 08272/29620 |
| **ವಿರಾಜಪೇಟೆ** | **ಬಾರಿಕೆರ ಮನೋಜ್‌ಕುಮಾರ್,** ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ **ಫೋನ್:** 08274/56591 |
| **ಕುಶಾಲ ನಗರ** | **ಕುಂಬಗೌಡನ ಸೋಮಣ್ಣ,** ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ-571 234 **ಫೋನ್:** 08276/73370 |
| **ಬೆಂಗಳೂರು ಮಹಾನಗರ** | **ಕಲ್ಲು ಮುಟ್ಲು ಬಸಪ್ಪ,** ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು-19, **ಫೋನ್:** 080/6500946 |

**ಚಂದಾ ವಿವರ: ಜೀವಾವಧಿ ಸದಸ್ಯತನ- 2000 ರೂ., ಬಿಡಿ ಪ್ರತಿ- 12ರೂ.**

**ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.**

# ಸಂಪಾದಕೀಯ :

## ಛಾಪಾ ಕಾಗದ ಹಗರಣ ಮತ್ತು ನಿಷೇದ :

ಛಾಪ ಕಾಗದ ಹಗರಣ ಸರ್ಕಾರದ ನಿರ್ಲಕ್ಷ್ಯ ನೀತಿ ಹಾಗೂ ಸರ್ಕಾರಿ ಶಾಮೂಲುತನದಿಂದ ಆಗಿದೆಯೆಂಬ ವಿಚಾರ ಎಲ್ಲರಿಗೂ ತಿಳಿದುದಾಗಿದೆ. ಅದನ್ನು ಸರ್ಕಾರವೇ ಸರಿಪಡಿಸಬೇಕೆ ಹೊರತು ಛಾಪಾಕಾಗದವನ್ನೆ ಉಪಯೋಗಿಸುವುದನ್ನು ನಿಲ್ಲಿಸಿದರೆ ಹೇಗೆ? ಛಾಪ ಕಾಗದವನ್ನೇ ಮಾರಿ ಎಷ್ಟೋ ಜನ ತಮ್ಮ ಜೀವನವನ್ನು ಸಾಗಿಸುತ್ತಿದ್ದರು. ಸರ್ಕಾರಕ್ಕೆ ಛಾಪ ಕಾಗದದಿಂದ ಎಷ್ಟೋ ಕೋಟಿ ಆದಾಯ ಬರುತ್ತಿತ್ತು.

ಅಂದ ಹಾಗೆ ಒಂದು ಶತಮಾನಕ್ಕಿಂತಲೂ ಹೆಚ್ಚಾಗಿ ನಿಯತ್ತಾಗಿ ನಡೆದು ಬಂದ ಒಂದು ವ್ಯವಸ್ಥೆ ಇಂದು ಹಾಳಾಗಿದೆ. ಬೇರೆ ಕಾಗದಗಳು ಛಾಪ ಕಾಗದದಷ್ಟು ಬಾಳಿಕೆ ಬರುವುದಿಲ್ಲ. ಎಷ್ಟೋ ಕೋಟಿ ಬೆಲೆ ಬಾಳುವ ಆಸ್ತಿಯ ವ್ಯವಹಾರವು ತೆಳುವಾದ ಕಾಗದದ ಮೇಲೆ ಇರುವುದು ಸರಿ ಅಲ್ಲ. ಅದರ ಆಯುಷ್ಯವು ಸಹ ಕಮ್ಮಿಯೇ ಸರಿ. ಒಂದು ವ್ಯವಸ್ಥೆಯು ನಿರಂತರವಾಗಿಯೂ ನಿಯತ್ತಾಗಿ ನಡೆದು ಬರುತ್ತಿರುವಾಗ ಅದರಲ್ಲಿಯ ಲೋಪದೋಷಗಳನ್ನು ಸರ್ಕಾರ ಕುಟುಬದ್ದವಾಗಿ ಎಚ್ಚರಿಕೆಯಿಂದ ನಿಭಾಯಿಸಬೇಕೆ ಹೊರತು ಆವ್ಯವಸ್ಥೆಯನ್ನೆ ನಿಲ್ಲಿಸುವುದು ಸರಿ ಕಾಣದು. ಬಹುಷ್ಯದ ದೃಷ್ಟಿಯಿಂದ ಚಿಂತಿಸಿದಾಗ ತೆಳು ಕಾಗದಕ್ಕೂ ಛಾಪ ಕಾಗದಕ್ಕೂ ಇರುವ ವ್ಯವತ್ಯಾಸವನ್ನು ತಿಳಿಯಲು ಹೆಚ್ಚು ಸಮಯ ಬೇಡ.

ಈ ಎಲ್ಲ ಕಾರಣಗಳಿಂದ ಕರ್ನಾಟಕ ಸರ್ಕಾರ ಛಾಪ ಕಾಗದವನ್ನು ನಿಷೇದಿಸುವ ನೀತಿಯನ್ನು ಕೈ ಬಿಟ್ಟು ಛಾಪ ಕಾಗದವನ್ನು ಉಪಯೋಗಿಸುವ ನೀತಿಯನ್ನು ಹಿಂದಿನಂತೆ ಮುಂದುವರಿಸಿಕೊಂಡು ಬರಲೆಂದು ಸಂಗಾತಿಯ ಬಯಕೆಯಾಗಿದೆ.

---

## ಶುಭ ವಿವಾಹ

1) ಬೆಟ್ಟಗೇರಿ ಗ್ರಾಮದ ಕಡ್ಲೇರ ದೇವಯ್ಯನವ್ರ ಮಂಜ ಪ್ರೇಮ್ ಕುಮಾರ್‌ನಿಗೂ ಮತ್ತೆ ಕೊಕೇರಿ ಗ್ರಾಮದ ಬೆಳಿಯಂಡ್ರ ಗಣಪತಿಯವರ ಮಗ್ಳು ವನಿತಾಳಿಗೂ ಮೂರ್ನಾಡು ಗೌಡ ಸಮಾಜದಲ್ಲಿ ಮದ್ವೆ ತಾರೀಖು 7-4-02 ಕ್ಕೆ ಕಳ್ಞ್‌ಗಡ.

2) ಕೊಡೆಕಲ್ಲ್ ದಿವಂಗತ ವೆಂಕಪ್ಪನವರ ಮೂರನೇಪುತ್ರ ಗಣೇಶನಿಗೂ ನಾಗವಾಲ ಗ್ರಾಮದ ನಂಗಾರು ಗೋಪಾಲನವ್ರ ಪುತ್ರಿ ಅಶ್ವಿನಿಗೂ ಕುಶಾಲನಗರ ಗೌಡ ಸಮಾಜಲಿ ತಾರೀಖ್1-4-2002 ರ‍್ಲಿ ಮದ್ವೆ ಬಾರಿ ಲಾಯ್ಕಾಗಿ ಕಳ್ಞ್‌ಗಡ.

3) ಮಕ್ಕಂದೂರು ಗ್ರಾಮದ ಅಣ್ಣೇಚ್ಚಿರಾ ಸೋಮಣ್ಣ ಅವರ ಪುತ್ರಿ ಭಾರತಿಗೂ ಬಿಳಿಗೇರಿ ಗ್ರಾಮದ ಬೈಲೇರಾ ಮಂದಣ್ಣನವ್ರ ಮಂಜ ಹರಿಶ್ಚಂದ್ರನಿಗೂ ಮಕ್ಕಂದೂರು ವ್ಯವಸಾಯ ಸೇವಾ ಸಹಕಾರ ಕಲ್ಯಾಣ ಮಂಟಪಲಿ ಭಾರೀ ಲಾಯ್ಕಲಿ ಕಳ್ಞ್‌ತ ತಿಳ್ಞ್ ಬಂದುಟ್ಟು.

4) ಕುಂದಚೇರಿ ಗ್ರಾಮದ ಕೆದಂಬಾಡಿ ತಿಮ್ಮಯ್ಯನವ್ರು ಮಂಜವ್ರ ಕವಿಪ್ರಸಾದಂಗೂ ಕಟ್ಟೆಮಾಡು ಗ್ರಾಮದ ಕಾರ್ಯಪ್ಪನವ್ರ ಮಗ್ಳು ಮಮತಾಂಗೂ ತಾರೀಖ್21-4-2002 ರ‍್ಲಿ ಮಡಿಕೇರಿಯ ಕೆಳ್ಗಿನ ಗೌಡ ಸಮಾಜ ಕಲ್ಯಾಣ ಮಂಟಪಲಿ ಗೌಜಿಯಾಗಿ ಕಳ್ದುಟ್ಟುಗಡ.

5) ಗಾಳಿಬೀಡು ಗ್ರಾಮದ ಯಾಲದಾಳು ಬಾಲಕೃಷ್ಣನವ್ರ ಮಗ್ಳು ಶೋಭಾಳ ಮತ್ತೆ ಮರಗೋಡು ಗ್ರಾಮದ ಅಯ್ಯಂಡ್ರ ಶಿವಣ್ಣನವ್ರ ಮಂಜ ಗೋಪಾಲಂತಗೂ ತಾರೀಖ್21-4-2002 ರ‍್ಲಿ ಮೇಲಿನ ಗೌಡ ಸಮಾಜಲಿ ಪದ್ಧತಿ ಪ್ರಕಾರ ಲಾಯ್ಕಲಿ ನಡ್ದ್‌ತ ತಿಳ್ದ್ ಬಂದುಟ್ಟು.

6) ಬೆಟ್ಟತ್ತೂರ್ ಗ್ರಾಮದ ಕಡ್ಯದ ನಾಣಯ್ಯನವ್ರ ಪುತ್ರ ದಿನೇಶಂಗೂ ಮತ್ತೆ ತೊಡಿಕಾನ ಗ್ರಾಮದ ಕಾಡುಪಂಜ ಕುಶಾಲಪ್ಪನವ್ರ ಮಂಜ ದಮಯಂತಿಗೂ ತಾರೀಖ್ 25-4-2002ರ‍್ಲಿ ಹೈದನ ಮನೇಲಿ ಪೊರ‍್ಲಾಗಿ ಹಳೆ ಪದ್ಧತಿ ಪ್ರಕಾರ ಬಾರಿ ಲಾಯ್ಕಲಿ ನಡ್ದುಟುತ ತಿಳ್ದು ಬಾತ್.

---

## ಸುಂಟಿಕೊಪ್ಪ ಹೋಬಳಿ ಯುವ ಕಾಂಗ್ರೆಸ್‌ಗೆ ಆಯ್ಕೆ

ಸುಂಟಿಕೊಪ್ಪ ಹೋಬಳಿ ಯುವ ಕಾಂಗ್ರೆಸ್ ಅಧ್ಯಕ್ಷರಾಗಿ ನಾಕೂರು ಶಿರಂಗಾಲ ಗ್ರಾಮದ ಬೆಳೆಗಾರ ಗೋವಿಂದಮ್ಮನ ಎ. ಕಾವೇರಪ್ಪ ಅವರು ನೇಮಕಗೊಂಡಿದ್ದಾರೆ.

---

ನನಗಾರು ಮಿತ್ರರಿಲ್ಲೆಂದು ಭಾವಿಸಬೇಡ, ಮಾನವಾ ನಿನ್ನಿಂದಲೇ ಧನೋತ್ಪಾದನೆ - ವಿವೇಕಾನಂದ

# ಕೊಡಗಿಗೆ ಸಂದ ರಾಷ್ಟ್ರೀಯ ಮನ್ನಣೆ :- ಶ್ರಮಭೂಷಣ ನಂಗಾರು ಪಿ. ಮೊನ್ನಪ್ಪ



ಭಾರತ ಸರಕಾರ ಪ್ರತಿವರ್ಷ ನೀಡುತ್ತಿರುವ ಪ್ರಧಾನ ಮಂತ್ರಿಗಳ ಶ್ರಮಭೂಷಣ ಪುರಸ್ಕಾರ-2000 ಪ್ರಶಸ್ತಿಯನ್ನು ಕೊಡಗು ಜಿಲ್ಲೆಯ ನಂಗಾರು ಮೋನಪ್ಪನವರು ಪಡೆದಿದ್ದು, ಅವರನ್ನು ಈಚೆಗೆ ನವದೆಹಲಿಯಲ್ಲಿ ನಡೆದ ಅದ್ದೂರಿ ಸಮಾರಂಭದಲ್ಲಿ ಪ್ರಧಾನಿ ಶ್ರೀ ಎ. ಬಿ. ವಾಜಪೇಯಿ ಸನ್ಮಾನಿಸಿದ್ದಾರೆ. ಸದ್ರಿ ಪ್ರಶಸ್ತಿ ರೂಪಾಯಿ ಒಂದು ಲಕ್ಷ ಮತ್ತು ಮಾನಪತ್ರವನ್ನು ಒಳಗೊಂಡಿದೆ ಸದ್ಯ ಬೆಂಗಳೂರಿನಲ್ಲಿ ಬಿ. ಹೆಚ್. ಎಲ್. ನಲ್ಲಿ ಸಹಾಯಕ ಫೋರ್‌ಮೆನ್ ಆಗಿ ದುಡಿಯುತ್ತಿರುವ ಮೋನಪ್ಪನವರು ಪ್ರಶಸ್ತಿಯನ್ನು ತಮ್ಮ ಮೂವರು ಸಹೋದ್ಯೋಗಿಗಳೊಂದಿಗೆ ಹಂಚಿ ಕೊಂಡಿದ್ದಾರೆ.

ಶ್ರಮ ಪುರಸ್ಕಾರವು ಕೇಂದ್ರ ಸರಕಾರದ ಕಾರ್ಮಿಕ ಸಚಿವಾಲಯದ ಆಶ್ರಯದಲ್ಲಿ ಸಾರ್ವಜನಿಕ ಉದ್ದಿಮೆಯ ಉದ್ಯೋಗಿಗಳಿಗೆ ನೀಡುವ ಅತ್ಯುನ್ನತ ಗೌರವವಾಗಿದೆ. ಶ್ರೀಯುತರು ಬಿ. ಹೆಚ್. ಎಲ್. ನ ಇ. ಪಿ. ಡಿ. (Electro Porcelin Division)ಯಲ್ಲಿ ಸುಧಾರಣೆ ಅಭಿವೃದ್ಧಿ ಯೋಜನೆ, ಕ್ರಿಯಾಶೀಲತೆ, ರಚನಾತ್ಮಕ ಸಂಶೋಧನೆ, ಚಿಂತನೆಗಳ ಮೂಲಕ ಮಿತವ್ಯಯದ ಸ್ವಯಂಚಾಲನಾ ಪರಿಶ್ರಮ (Low Cost Automation)ಗಳು ಸೇರಿದಂತೆ ಸಂಸ್ಥೆಗೆ ನಿರಂತರ ಆದಾಯವನ್ನು ತಂದುಕೊಟ್ಟಿದ್ದಾರೆ. ಅಲ್ಲದೆ ತಮ್ಮ ತಂಡದೊಂದಿಗೆ ಅಭಿವೃದ್ಧಿ ಪಡಿಸಿ "ಆಟೋಮ್ಯಾಟಿಕ್ ಪಗ್‌ದ ಕಟಿಂಗ್ ಮೆಷಿನ್" ಉತ್ಕೃಷ್ಟ ದೇಶಿಯ ತಂತ್ರಜ್ಞಾನವಾಗಿದ್ದು ಯಾವುದೇ ವಿದೇಶಿ ತಾಂತ್ರಿಕತೆಗೆ ಸರಿಸಾಟಿಯಾಗಿರುತ್ತದೆ. ಇದರೊಂದಿಗೆ ಇವರ ಮುತುವರ್ಜಿಯಿಂದ ಅಭಿವೃದ್ಧಿ ಪಡಿಸಿದ ಕಾಸ್ಟ್ ಟೇಪ್‌ಪಂಚಿಂಗ್ ಮೆಷಿನ್ಸ್ ನ್ಯೂಮ್ಯಾಟಿಕಲೀ ಟೆಸ್ಟೆಡ್, ಮಾಲೆಟ್ ಸ್ಪ್ರೇಯಿಂಗ್ ಮೆಷಿನ್" ಆಟೋಮ್ಯಾಟಿಕ್ ಸೆಮಿಕಂಡಕ್ಷನ್ ಗ್ಲೇಜಿಂಗ್ ಮೆಷಿನ್, 'ಹೈಡ್ರಾಲಿಕ್ ಸ್ಕೀಮ್ ಮತ್ತು' ಅಪ್‌ಗ್ರೇಡೆಡ್ ರುಟಿನ್ ಮೆಕಾನಿಕಲ್ ಟೆಸ್ಟೆಡ್ ಎಕ್ವಿಪ್‌ಮೆಂಟ್ ಬಶಿಂಗ್ ಬೆಂಡ್ ಟೆಸ್ಟಿಂಗ್ ಮೆಷಿನ್, ಮೊದಲಾದ ವಿವಿಧ ನವೀನ ಯೋಜನೆಗಳಿಂದಾಗಿ ಕಾರ್ಖಾನೆಗೆ ವಾರ್ಷಿಕ 165.19 ಲಕ್ಷದಷ್ಟು ಉಳಿತಾಯವನ್ನು ಸಾಧಿಸುವಂತಾದುದು ಶ್ಲಾಘನೀಯ!

ಈ ಪುರಸ್ಕಾರ ರಾಷ್ಟ್ರದಲ್ಲಿ ವಿಶಿಷ್ಟ ಗೌರವಕ್ಕೆ ಪಾತ್ರವಾಗಿದ್ದು ಉತ್ಪಾದನೆಯಲ್ಲಿ ಹೆಚ್ಚಳ, ಗುಣಮಟ್ಟದಲ್ಲಿ ಸುಧಾರಣೆ, ಸುರಕ್ಷಿತತೆ ಮತ್ತು ವಿದೇಶಿ ವಿನಿಮಯಗಳ ಸಾಧನೀಯ ಗಳಿಕೆಯನ್ನು ಅನುಲಕ್ಷಿಸಿ ನೀಡಲಾಗುತ್ತದೆ. ಶ್ರೀ. ಎನ್. ಪಿ. ಮೋನಪ್ಪನವರು ತಮ್ಮ ಕಾರ್ಯದಕ್ಷತೆಯಿಂದ 2000 ಸಾಲಿನ ಪ್ರಶಸ್ತಿಗೆ ಅರ್ಹ ವ್ಯಕ್ತಿಯಾಗಿ ಆಯ್ಕೆಯಾದುದು ನಾಡಿಗೆ ಸಂದ ಹೆಮ್ಮೆಯಾಗಿದೆ. ಇವರು 1956 ಜೂನ್ ಒಂದರಂದು ಜೋಡುಪಾಲದ ಬಡ ಕೃಷಿ ಕುಟುಂಬದ ನಂಗಾರು ಶ್ರೀ ಪುತ್ತು ಮತ್ತು ಶ್ರೀಮತಿ ಮುದ್ದಮ್ಮ ದಂಪತಿಗಳ ದ್ವಿತೀಯ ಪುತ್ರರಾಗಿ ಜನಿಸಿದರು. ಪ್ರೌಢ ಶಿಕ್ಷಣದ ಬಳಿಕ ಐ.ಟಿ.ಐ. ಎಲೆಕ್ಟ್ರಿಕಲ್ಸ್ ವಿಭಾಗದಲ್ಲಿ ತರಬೇತಿ ಪಡೆದು, ಕುದುರೆಮುಖದ ಕಬ್ಬಿಣದ ಕಾರ್ಖಾನೆಯಲ್ಲಿ ನಂತರ ಬೆಂಗಳೂರಿನ ಕಿರ್ಲೋಸ್ಕರ್ ಕಂಪೆನಿಯಲ್ಲಿ ಸೇವೆಯನ್ನು ಆರಂಭ ಮಾಡಿದ್ದರು. 1980 ರಲ್ಲಿ ಬಿ. ಹೆಚ್. ಎಲ್. ನಲ್ಲಿ ಉದ್ಯೋಗಿಯಾಗಿ ಸೇರಿ ತನ್ನ ನೈಪುಣ್ಯತೆ, ಕಾರ್ಯಶೀಲತೆ, ನಿರ್ವಹಣಾ ಸಾಮರ್ಥ್ಯ ಮತ್ತು ಅನುಭವಗಳ ಆಧಾರದಲ್ಲಿ ಕ್ರಮವಾಗಿ ಸೂಪರ್‌ವೈಸರ್, ಸಹಾಯಕ ಫೋರ್‌ಮನ್ ಹುದ್ದೆಗಳಿಗೆ ಭಡ್ತಿ ಹೊಂದಿದ್ದಾರೆ. ಇವರ ವಿಶೇಷ ಸಾಧನೆಗಳಿಗಾಗಿ 1997 ರಲ್ಲಿ ಇಂದಿರಾ ಗಾಂಧಿ ರಾಷ್ಟ್ರೀಯ ಸ್ಮಾರಕ ಬಹುಮಾನವನ್ನು ಗಳಿಸಿಕೊಂಡಿರುವುದನ್ನು ಕೊಡಗು ಸಂಗಾತಿ ಸಂಪುಟ 2 ಸಂಚಿಕೆ 2 ರಲ್ಲಿ ಪ್ರಕಟಿಸಿದನ್ನು ಇಲ್ಲಿ ಸ್ಮರಿಸಬಹುದು.

ಶ್ರೀ ಎನ್. ಪಿ. ಮೋನಪ್ಪನವರು ಬಹಳ ಕಿರಿಯ ವಯಸ್ಸಿನಲ್ಲಿಯೇ ಉನ್ನತ ಸಾಧನೆಯನ್ನು ಮಾಡಿದ ಅಪರೂಪ ಪ್ರತಿಭೆ ಸದಾ ಸರಳ ಸಜ್ಜನಿಕೆಯ ವ್ಯಕ್ತಿತ್ವ ಇವರದು ಪುಟ್ಟ ಮತ್ತು ಚೊಕ್ಕ ಸಂಸಾರ. ಇವರ ಮಡದಿ ಶ್ರೀಮತಿ ಪುಷ್ಪಾವತಿಯವರು ಬೆಂಗಳೂರಿನ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಉದ್ಯೋಗಿಯಾಗಿದ್ದಾರೆ. ಇವರ ಪುತ್ರಿ ಕುಸುಮ ಆರನೇ ತರಗತಿಯಲ್ಲಿ ಓದುತ್ತಿದ್ದಾಳೆ. ತನ್ನ ವೃತ್ತಿ ಜೀವನದಲ್ಲಿ ಮಹತ್ವವನ್ನು ಸಾಧಿಸಬೇಕೆಂಬ ಮಹತ್ವಕಾಂಕ್ಷೆಯ ಶ್ರೀ ನಂಗಾರು ಪಿ. ಮೋನಪ್ಪನವರು ಸಾಧನೆಯ ಕಿರೀಟಕ್ಕೆ ಮತ್ತಷ್ಟು ಗರಿಗಳು ಸೇರುವಂತಾಗಲಿ.

ಯು. ಸುಬ್ರಾಯಗೌಡ
ಉಪನ್ಯಾಸಕ, ಬೆಳ್ಳಾರೆ.

---

ದುಡಿತವು ದುಡ್ಡಿನ ತಾಯಿ ಅಷ್ಟೆ ಅಲ್ಲ, ಮೋಕ್ಷದ ತಾಯಿಯೂ ಹೌದು - ಗಾದೆ

# ಸಂಸ್ಕೃತಿ ಮರೆತು ಅಪಾಯದ ಆಡಂಬರದ ಕಡೆಗೆ ನಮ್ಮ ಮದುವೆಗಳು!

ವ್ಯಕ್ತಿಯ ಜೀವನದಲ್ಲಿ ಮದುವೆ ಒಂದುಬಾರಿ ಮಾತ್ರ ಹಾದೂ ಹೋಗುವ ಅವಿಸ್ಮರಣೀಯ ಕ್ಷಣ. ಅದು ಆತನ/ಆಕೆಯ ಜೀವನಕ್ಕೆ ಹೊಸ ಆಯಾಮವನ್ನು ನೀಡಬಲ್ಲ ಪ್ರಕ್ರಿಯೆ. ಆದುದರಿಂದಲೇ ಮದುವೆಯಾಗಬೇಕಾದರೆ ಹಲವಾರು ಪದ್ಧತಿ ಸಂಪ್ರದಾಯ ಪರಂಪರೆಗಳನ್ನು ನಮ್ಮ ಹಿರಿಯರು ರೂಢಿಸಿಕೊಂಡು ಬಂದಿದ್ದಾರೆ. ಗೌಡ ಜನಾಂಗವೂ ಮದುವೆಗಳಲ್ಲಿ ಹಲವಾರು ಸಂಸ್ಕೃತಿ ಸಂಪ್ರದಾಯಗಳನ್ನೂ ಹೊಂದಿದ್ದರೂ ಕೂಡ ಹಲವರ ಪ್ರಭಾವದಿಂದ ಇಂದು ಸಂಸ್ಕೃತಿ ಪದ್ಧತಿಗಳು ನಶಿಸುತ್ತವೆ. ಸಂಸ್ಕೃತಿಯ ಸ್ಥಳವನ್ನು ಆಡಂಬರ, ಪ್ರತಿಷ್ಠೆಗಳು ಆಕ್ರಮಿಸಿ ಕೊಂಡು ನಮ್ಮ ಜನಾಂಗವೇ ಅಪಾಯದ ಅಂಚನ್ನು ತಲುಪುತ್ತಿದೆ.

ಇತ್ತೀಚೆಗೆ ಮಡಿಕೇರಿಯಲ್ಲಿ 'ಕೊಡಗು ಗೌಡ ಸಂಸ್ಕೃತಿ ಎಂಬ ಚರ್ಚಾಗೋಷ್ಠಿ ನಡೆಯಿತು. ಆ ಚರ್ಚಾಗೋಷ್ಠಿಯಲ್ಲಿ ಕೇವಲ ಬೆರಳೆಣಿಕೆಯಷ್ಟು ಜನ ಪಾಲ್ಗೊಂಡಿದ್ದರು. ಇದರಿಂದಲೇ ತಿಳಿಯುತ್ತದೆ ನಮಗೆ ನಮ್ಮ ಸಂಸ್ಕೃತಿಯ ಬಗ್ಗೆ ಎಷ್ಟು ಜಾಗೃತಿಯಿದೆ ಎಂಬುದು. ಯಾಕೆ ಹೇಗಾಯಿತು? ಸಂಸ್ಕೃತಿಯ ಬಗ್ಗೆ ಯುವಜನತೆ ತಾತ್ಸಾರ ತಾಳಲು ಯಾರು ಕಾರಣ? ಇದನ್ನೂ ಕೆದಕುತ್ತಾ ಹೋದರೆ ಸಂಸ್ಕೃತಿಯ ಮಹತ್ವವನ್ನು ಮಕ್ಕಳಿಗೆ ವಿವರಿಸದ ಹಿರಿಯರೇ ಸಂಸ್ಕೃತಿಯ ವಿನಾಶಕ್ಕೆ ಕಾರಣವೆನ್ನಬೇಕಾಗುತ್ತದೆ. ಸಾಮಾನ್ಯವಾಗಿ ಯಾವುದೇ ಸಮಾರಂಭ ನಡೆಯಲಿ ಅಥವಾ ಆಚರಣೆಯೇ ಇರಲಿ, ಮಾತುಕತೆಯೇ ಇರಲಿ ಅಲ್ಲಿ ಮಕ್ಕಳಿಗೆ ಹಿರಿಯರು ಅವಕಾಶ ನೀಡುವುದಿಲ್ಲ. ಕೆಲವೊಮ್ಮೆ ಉತ್ಸಾಹಕ್ಕೆಂದು ಮಕ್ಕಳು ಪ್ರಶ್ನಿಸಿದಾಗಲೂ ನೀನು ಚಿಕ್ಕವ, ಮಧ್ಯೆ ಬಾಯಿಹಾಕಬೇಡ ಎಂದು ಗದರಿಬಿಡುತ್ತಾರೆ. ಇದರಿಂದ ಮಕ್ಕಳು ಸಂಸ್ಕೃತಿ ಪದ್ಧತಿಗಳಿಂದ ದೂರ ಉಳಿಯುವಂತಾಗಿದೆ. ಅದು ಬಿಟ್ಟು ಪ್ರತಿ ಸಮಾರಂಭಗಳಲ್ಲೂ, ತಮ್ಮ ಮನೆಗಳಲ್ಲೂ ಮಕ್ಕಳಿಗೆ ಪದ್ಧತಿಗಳ ಆಚರಣೆಗಳಿಗೆ ಪಾಲ್ಗೊಳ್ಳುವ ಅವಕಾಶ ನೀಡಬೇಕು. ಅಲ್ಲದೆ ಹಿರಿಯರು ಕೇವಲ ಪದ್ಧತಿ ಸಂಸ್ಕೃತಿ ಆಚರಣೆಯನ್ನು ಮಾತ್ರ ಹೇಳಿಕೊಡದೆ, ಆ ಆಚರಣೆಗಳ ಉದ್ದೇಶ ಮತ್ತು ಹಿನ್ನಲೆಯನ್ನು ಯುವ ಜನತೆಗೆ ವಿವರಿಸಿಕೊಟ್ಟಾಗ ಮಾತ್ರ ನಮ್ಮ ಸಂಸ್ಕೃತಿ ಉಳಿಯಲು ಸಾಧ್ಯ.

ಇಂದು ನಮ್ಮಲ್ಲಿ ಸಂಸ್ಕೃತಿಗಿಂತಲೂ ಆಡಂಬರಕ್ಕೆ ಹೆಚ್ಚು ಒತ್ತನ್ನು ನೀಡಲಾಗುತ್ತಿದೆ. ಮೂರು ಹೊತ್ತಿನ ಊಟಕ್ಕೂ ಕಷ್ಟ ಪಡುವ ಜನ ತಮ್ಮ ಮಕ್ಕಳ ಮದುವೆಯನ್ನು ಮಾತ್ರ ಸಾಲ ಮಾಡಿಯಾದರೂ ಆಡಂಬರದಿಂದ ಮಾಡಲು ಪ್ರಯತ್ನಿಸುತ್ತಾರೆ. ನಂತರ ಜೀವನವಿಡಿ ಮದುವೆಗಾಗಿ ಮಾಡಿದ ಸಾಲವನ್ನು ತೀರಿಸಲು ಹೆಣಗಾಡುತ್ತಾರೆ. ಒಂದು ವೇಳೆ ಆಡಂಬರದಿಂದ ಮದುವೆ ಮಾಡದಿದ್ದರೆ ಈ ಸಮಾಜದಲ್ಲಿ ದೂಷಿಸಿಬಿಡುತ್ತಾರೆ. ಎನ್ನುವ ಭಯ ಅವರಿಗೆ. ಆದರೆ ವಾಸ್ತವವಾಗಿ ಸಮಾಜ ಆಡಂಬರದಿಂದ ಮದುವೆ ಮಾಡಿದವರನ್ನು ಬಿಡದೆ ದೂಷಿಸುತ್ತದೆ. ಪ್ರತಿಯೊಂದರಲ್ಲಿಯೂ ಕೊಂಕು ಹುಡುಕುವುದು ಸಮಾಜದ ಹಣೆಬರಹ. ಆದುದರಿಂದ ವ್ಯಕ್ತಿ ತನಗಾಗಿ ಬದುಕಬೇಕೇ ಹೊರತು ಸಮಾಜಕ್ಕಾಗಿ ಅಲ್ಲ. ಆದರೆ ನಮ್ಮ ಜನ ಸಮಾಜದ ಮುಂದೆ ಒಣ ಪ್ರತಿಷ್ಠೆಯನ್ನು ತೋರಿಸುವುದಕ್ಕೆ ಏನೆಲ್ಲಾ ಪ್ರಯತ್ನಪಡುತ್ತಿದ್ದಾರೆ. ಮದುವೆಗಳಲ್ಲಿ ಮಾಂಸದ ಬಳಕೆ 'ಗೌಡ ಸಂಸ್ಕೃತಿ'ಯೇ ಅಲ್ಲ. ಆದರೆ ಮಾಂಸದ ಬಳಕೆಯಿಲ್ಲದೆ ಮದುವೆಯುಂಟೆ? ಇತ್ತೀಚೆಗಂತೂ ಚಪ್ಪರ ಸಮಾರಂಭಗಳಲ್ಲಿ "ಕುಡಿತ"ದ ಏರ್ಪಾಟನ್ನು ಮಾಡಲೇ ಬೇಕು ಎಂಬಂತಾಗಿದೆ. ಮದುವೆಗಿಂತಲೂ ವೀಳ್ಯ ಶಾಸ್ತ್ರದ ಪದ್ಧತಿ ಇನ್ನೂ ಆಡಂಬರವಾಗಿ ನಡೆಯುತ್ತಿರುವ ದಿನಗಳು ಹತ್ತಿರ ಬಂದಿದೆ. "ಕೊಡಗು ಸಂಗಾತಿ" ಪತ್ರಿಕೆಗೆ ಧನ ಸಹಾಯ ಮಾಡಿ ಎಂದರೆ ನಮ್ಮ ಜನಾಂಗದ ಬಳಿ ಹಣವಿಲ್ಲ. ಗೌಡ ಜನಾಂಗದ ಬಡ ವಿದ್ಯಾರ್ಥಿಯೊಬ್ಬನಿಗೆ ಧನಸಹಾಯ ಮಾಡಿ, ರೋಗಿಯೊಬ್ಬನ ಪ್ರಾಣ ಉಳಿಸಲು ಧನ ಸಹಾಯ ಮಾಡಿ, ಗೌಡ ಸಂಸ್ಕತಿ ಉಳಿಸುವ ಸಮಾರಂಭ ಏರ್ಪಡಿಸಲು ಧನ ಸಹಾಯ ನೀಡಿ ಎಂದು ಜನಾಂಗದ ಬಳಿಗೆ ಧಾವಿಸಿದರೆ ತೀರಾ ಬಡವರಾಗಿ ಬಿಡುತ್ತಾರೆ. ಜನ ತಮ್ಮ ಮಕ್ಕಳ ಮದುವೆಗಳನ್ನು ಅದ್ದೂರಿಯಾಗಿ ನಡೆಸುವಾಗ ಶ್ರೀಮಂತರಾಗಿ ಬಿಡುವುದು ಎಂತಹ ಆಶ್ಚರ್ಯವಲ್ಲವೇ?

ಮದುವೆ ಪದ್ಧತಿಗಳಲ್ಲಿ ಇಂದು ಗಮನಾರ್ಹ ಸುಧಾರಣೆಯಾಗಬೇಕಾಗಿದೆ. ಗೌಡ ಜನಾಂಗಕ್ಕಿಂದು ಸಂಸ್ಕೃತಿಗಿಂತಲೂ ಆರ್ಥಿಕ ಸ್ವಾವಲಂಬನೆ ಮುಖ್ಯ. ವೈಚಾರಿಕತೆ ಬೆಳೆದಂತೆಲ್ಲಾ ಯೋಗ್ಯ ಸುಧಾರಣೆ ಪ್ರತಿಯೊಂದು ಸಮಾರಂಭದಲ್ಲಾಗಬೇಕು. ಅಂದರೆ ಅನಗತ್ಯ ದುಂದು ವೆಚ್ಚವನ್ನು ತಡೆಗಟ್ಟುವ ಮೂಲಕ ಹಣ ಜನಾಂಗದಭಿವೃದ್ಧಿಗೆ ಸದುಪಯೋಗವಾಗುವಂತಾಗಬೇಕು. ಕಳೆದ ಡಿಸೆಂಬರ್‌ನಲ್ಲಿ ಮೈಸೂರಿನಲ್ಲಿ "ವಧೂ-ವರರ ಮುಖಾ-ಮುಖಿ" ಕಾರ್ಯಕ್ರಮ ನಡೆಯಿತು. ಇಂತಹ ಆದರ್ಶಪೂರ್ಣ ಕಾರ್ಯಕ್ರಮಗಳು ನಮ್ಮಲ್ಲಿ ನಡೆಯಬೇಕಿದೆ. ಹಲವಾರು ಮುಂದುವರಿದ ಜನಾಂಗಗಳೂ ಕೂಡ ಸಾಮೂಹಿಕ ವಿವಾಹದ ಕಾರ್ಯಕ್ರಮವನ್ನು ಮಾಡಿ ಸುಮಾರು 8 ಕೋಟಿ ರೂಪಾಯಿಗಳನ್ನು ಉಳಿಸಿಕೊಳ್ಳುತ್ತಾರೆ. ನಮ್ಮ ಜನಾಂಗದಲ್ಲೂ ಸಾಮೂಹಿಕ ವಿವಾಹ ಕಾರ್ಯಕ್ರಮವನ್ನೇರ್ಪಡಿಸಿದರೆ, ಹಣ, ಸಮಯ ಉಳಿಯುವುದಲ್ಲದೆ ಜನಾಂಗವೂ ಆರ್ಥಿಕ ಸ್ವಾವಲಂಬನೆಯತ್ತ ಸಾಗಬಹುದು. 'ಕೊಡಗು ಸಂಗಾತಿ' ಪತ್ರಿಕೆಗಾಗಿ ಹಲವು ಗಣ್ಯರನ್ನು ಸಂದರ್ಶಿಸಿದಾಗ ಅವರು ನಮ್ಮಲ್ಲಿ ಶ್ರೀಮಂತರು-ಶ್ರೀಮಂತರೊಡನೆಯೇ ವೈವಾಹಿಕ ಸಂಬಂಧಗಳನ್ನು ಏರ್ಪಡಿಸುತ್ತಾರೆ. ಇದರಿಂದ ಆರ್ಥಿಕ ಕೇಂದ್ರಿಕರಣವಾಗುತ್ತದೆ. ಶ್ರೀಮಂತ-ಬಡವರ ನಡುವೆ ವೈವಾಹಿಕ ಸಂಪರ್ಕವೇರ್ಪಟ್ಟರೆ, ಆದರಿಂದ ಆರ್ಥಿಕ ವಿಕೇಂದ್ರೀಕರಣವಾಗಿ ಆರ್ಥಿಕ ಸಮಾನತೆ ನಮ್ಮ ಜನಾಂಗದಲ್ಲಿ ಮೂಡಬಲ್ಲದು. ಆ ದಿಸೆಯಲ್ಲಿ ಕಾರ್ಯಪ್ರವೃತ್ತರಾಗಬೇಕೆಂದು ಸಲಹೆ ನೀಡಿದರು. ಇದು ಒಂದು ಅತ್ಯುತ್ತಮ ಸಲಹೆ. ಆದರೆ ಆ ಸಲಹೆಯನ್ನು ಈಡೇರಿಸಲು ಸ್ವತಃ ಸಲಹೆ ನೀಡಿದವರಿಗೂ ಸಾಧ್ಯವಾಗಿಲ್ಲ. ಆದರೂ ಈ ದಿಸೆಯಲ್ಲಿ ಪ್ರಯತ್ನಿಸುವುದು ಒಳ್ಳೆಯದು. ಆಧುನಿಕ ಕಾಲಕ್ಕೆ ತಕ್ಕಂತೆ ಅರ್ಥಪೂರ್ಣ ಸುಧಾರಣೆಯಾಗಲಿ, ಊಟದ ಪದ್ಧತಿಯಲ್ಲಿ 'ಬಫೆ ಪದ್ಧತಿ' ಎಂಬ 'ಭಿಕ್ಷಾ ಪದ್ಧತಿ' ತೊಲಗಿ ಎಲ್ಲರೂ ಕೂತುಂಡು ಹರ್ಷಿಸುವ ಕಾಲ ಶಾಶ್ವತವಾಗಿರಲಿ ಎಂದು ಆಶಿಸೋಣವೇ?

ವರದಿ: ಪಟ್ಟಡ ಶಿವಕುಮಾರ್.

ಬರ ಮೂರು ದಿವಸ ವ್ಯವಹಾರ ಅನುಗಾಲ - ಗಾದೆ

# ಧಾರವಾಡ ಜಿಲ್ಲೆಯ ಪ್ರಧಾನ ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತಿ ಹೊಂದಿದ ಶ್ರೀ ಚೊಟ್ಟೆಕೇರಿಯಂಡ ಕೆ. ಬಾಲಕೃಷ್ಣ ಮತ್ತು ಪದ್ಮ ದಂಪತಿಗಳು.



ಚೊಟ್ಟೆಕೇರಿಯಂಡ ಕೆ. ಬಾಲಕೃಷ್ಣನವರ ಮೂಲಸ್ಥಳ ಟಿ. ಶೆಟ್ಟಿಗೇರಿ ಹಳ್ಳಿ, ವಿರಾಜಪೇಟೆ ತಾಲ್ಲೂಕು, ಕೊಡಗು ಜಿಲ್ಲೆ. ಇವರು 1940 ರಲ್ಲಿ ಶಿವಮೊಗ್ಗೆಯಲ್ಲಿ ಹುಟ್ಟಿದರು. ಇವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ B.Com ಮಾಡಿ ಬೆಂಗಳೂರಿನ ಸರ್ಕಾರಿಯ ಲಾ ಕಾಲೇಜಿನಲ್ಲಿ Law ಮಾಡಿದ ನಂತರ ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಸಮಾಜಶಾಸ್ತ್ರ ವಿಷಯದಲ್ಲಿ M.A. ಮಾಡಿದರು.

ಇವರು 1964 ರಿಂದ 1971 ರವರೆಗೆ ಬೆಂಗಳೂರಿನಲ್ಲಿ ವಕೀಲ ವೃತ್ತಿ ಮಾಡಿ, 1971 ರಲ್ಲಿ Munsiff and J.M.F.C. ಗೆ ಸೇರಿದರು. ಇವರು ಕುಣಿಗಲ್ (ತುಮಕೂರು ಜಿಲ್ಲೆ) ಕೆ. ಆರ್. ಪೇಟೆ, ಮಂಡ್ಯ ಬೆಂಗಳೂರು ನಂಜನಗೂಡಿನಲ್ಲಿ ಸೇವೆ ಸಲ್ಲಿಸಿದ ನಂತರ Civil Judge ಆಗಿ ಬಡ್ತಿ ಸಿಕ್ಕಿತು. ಬೆಂಗಳೂರಿನಲ್ಲಿ Small cause Court ನಲ್ಲಿ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿದರು. ಹಾಗೂ ಲಾ ಇಲಾಖೆಯಲ್ಲಿ Deputy Secretary ಆಗಿದ್ದರು. ಇವರು ತುಮಕೂರಿನ ಪ್ರಸಿದ್ಧ ಸಿದ್ದಲಿಂಗ ಮಠದ ಹಿರಿಯ ಹಾಗೂ ಕಿರಿಯ ಪುರೋಹಿತರ ಕೇಸಿನಲ್ಲಿ Chief Judicial Magistrate ಆಗಿ ಕಾರ್ಯ ನಿರ್ವಹಿಸಿದ್ದರು.

ಅನಂತರ ಇವರು ಮೈಸೂರಿನಲ್ಲಿ Chief Judicial Magistrate ಆಗಿ ಸೇವೆ ಸಲ್ಲಿಸಿ ಹಾಗೆ ಬಡ್ತಿಯ ಮೇಲೆ ಜಿಲ್ಲೆಯ ನ್ಯಾಯಾಧೀಶರಾಗಿ ಕೆಲಸ ಮಾಡಿದರು. ನಂತರ ಮೈಸೂರಿನಲ್ಲಿ ಕಾರ್ಮಿಕರ ನ್ಯಾಯಾಲಯದಲ್ಲಿ (Labour Court) ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿದ ನಂತರ ಮಂಡ್ಯ ಜಿಲ್ಲೆಯಲ್ಲಿ Additional District and Sessions Judge ಆಗಿ ಸೇವೆ ಸಲ್ಲಿಸಿದರು. 1997 ಜನವರಿ 24 ರಿಂದ ದಾರವಾಡದಲ್ಲಿ Principal District and Session Judge ಆಗಿ ಸೇವೆ ಸಲ್ಲಿಸಿ ನಿವೃತ್ತಿಯಾಗಿದ್ದಾರೆ.

ಇವರಿಗೆ ಕ್ರೀಡೆ ಎಂದರೆ ತುಂಬಾ ಪ್ರಿಯ. ಅದರಲ್ಲೂ ಸೆಟಲ್ ಬ್ಯಾಡ್‌ಮೆಂಟನ್ ಟೇಬಲ್‌ಟೆನ್ನಿಸ್, ಕ್ರಿಕೆಟ್ ಯೋಗ. ಮಾಡುತ್ತಾರೆ. ಇವರು ಎಲ್ಲ ತರದ ಸಂಗೀತ ಪ್ರಿಯರು. ಇವರಿಗೆ ಮೂವರು ಪುತ್ರಿಯರು. ಹಿರಿಯವ ಡಾಕ್ಟರ್ ಆಗಿ ಬೆಂಗಳೂರಿನ ಡಾ|| ಶರಣ್ ಅವರನ್ನು ವಿವಾಹವಾಗಿದ್ದಾರೆ. 2ನೇ ಯವರು ಪವಿತ್ರ MSc. ಮಾಡಿ ಹುದಿಕೇರಿಯ ಪ್ರದೀಪ್‌ನವರನ್ನು ವಿವಾಹವಾಗಿದ್ದಾರೆ. ಮೂರನೇಯವರು ಪಾಪ್ಸಿ MSc ಮಾಡಿ ಪಶ್ಚಿಮ ಬಂಗಾಳದ ನಿವಾಸಿ ಮಿಲಿಟರಿ ಕ್ಯಾಪ್ಟೆನ್ ನವರನ್ನು ವಿವಾಹವಾಗಿದ್ದಾರೆ.

ಇವರು ಮಂಡ್ಯದಲ್ಲಿದ್ದಾಗ ಸೈನಿಕ ನಗರದ ಹಿತವನ್ನು ಬಯಸಿ ಅಲ್ಲಿಗೆ ಬಸ್ ಸೌಕರ್ಯವನ್ನು ಒದಗಿಸಿರುವರು. ಹಾಗೆಯೇ ವರ್ಷಂಪ್ರತಿ ಕಾವೇರಿ ತೀರ್ಥ ಪ್ರಸಾದವನ್ನು ಹಂಚುವ ಏರ್ಪಾಡಿಗೂ ಅಡಿಪಾಯ ಹಾಕಿದ್ದಲ್ಲದೆ ಹಲವಾರು ಸಮಾಜ ಸೇವೆ ಕಾರ್ಯಗಳಲ್ಲಿ ನಿರತರಾಗಿದ್ದಲ್ಲದೆ ಈಗ ತನ್ನ ನಿವೃತ್ತಿ ಜೀವನದಲ್ಲಿ ಬೆಂಗಳೂರಿನ ಇಂದಿರ ನಗರದಲ್ಲಿ ನೆಲೆಸಿ ಜನರಿಗೆ ಕಾನೂನು ಸಲಹೆಯನ್ನು ನೀಡುತ್ತಿರುವುರು. ಈ ಕೆಳಗೆ ಶ್ರೀಯವರ ಅನುಭವವನ್ನು ನೀಡಿದ್ದೇನೆ.

ಸಂದರ್ಶನ : ಪಟ್ಟಡ ಪ್ರಭಾಕರ್

ಬರಹ: ಹುದೇರಿ ಟೀನಾ ಸೋಮಣ್ಣ LL.B

## "ನ್ಯಾಯಾಧೀಶರಾಗಿ ನನ್ನ ಅನುಭವಗಳು"

ನಾನು 26-7-1971 ರಂದು ಮುನಿಸೀಫ್ ಹಾಗೂ ಜೆ. ಎಂ. ಎಫ್. ಸಿ. ಹುದ್ದೆಗೆ ನೇಮಕಗೊಂಡೆ. ಈ ಹುದ್ದೆಗೆ ನಾನು ಬರಲು ಕಾರಣ, ವಕೀಲ ವೃತ್ತಿಯಲ್ಲಿ ನಾನು ಮನಗಂಡ ಕೆಲವು ಕಟು ಸತ್ಯ ಇದರಲ್ಲಿ ಬಹುಮುಖ್ಯವಾದದ್ದು. ನನ್ನ ನಿತ್ಯ ಜೀವನಕ್ಕಾಗಿ ಹಣಗಳಿಕೆಗಾಗಿ ನಾನು ಕೆಲವು ಕಕ್ಷಿಗಾರರು ಹೇಳುವ ಸುಳ್ಳು ಕತೆಯನ್ನು ನಿಜವೆಂದು ನ್ಯಾಯಾಲಯದಲ್ಲಿ ನನ್ನ ವಕೀಲಿ ಪೋಷಾಕನ್ನು ಧರಿಸಿ ಮಾಡಬೇಕಾಗಿದ್ದ ಕೆಲಸ ಅಂದರೆ" ಸುಳ್ಳನ್ನೇ ಸತ್ಯವೆಂದು ಪ್ರತಿಪಾದಿಸಿ ಆಡುವ ಒಂದು ನಾಟಕ". ಇನ್ನು ಎರಡನೇ ಕಾರಣ ಸತ್ಯ ರೀತಿಯಲ್ಲಿ ನನ್ನ ಕಕ್ಷಿದಾರನಿಗೆ ನೀಡಿದ ಅರಿವು. ಇದರಿಂದ ಕೆಲವು ಕಕ್ಷಿಗಾರರು ಕೇಸನ್ನು ನನ್ನ ಹತ್ತಿರ ತರದೆ ತಾವು ಹೇಳಿದಂತೆ ಕೇಳುವ ಬೇರೆಯವರ ಕಡೆಗೆ ಹೋದದ್ದು ಮತ್ತು ಕಡೆಯದಾಗಿ ವಕೀಲ ವೃತ್ತಿಯಲ್ಲಿ ಸತ್ಯ ಮಾರ್ಗದಿಂದ ನಡೆಯದೇ ಸುಳ್ಳನ್ನೇ ಸತ್ಯವೆಂದು ಪ್ರತಿಪಾದಿಸಿ ನನ್ನ ಜೀವನ ನಡೆಸುವ ಅನಿವಾರ್ಯವಾದ ಮತ್ತು ಮನಸ್ಸಿಗೆ ಬಹು ದುಃಕ ತರುವಂಥ ಪರಿಸ್ಥಿತಿಯು ಕಾರಣವಾಯಿತು. ನ್ಯಾಯಾಧೀಶನಾಗಿ ನಾನು ನೇಮಕವಾಗಿ 26-7-71 ರಂದು ಹೊಸ ಹುದ್ದೆಗೆ ಸೇರಿಕೊಳ್ಳುವ ಹಿಂದಿನ ದಿನ ಆಗ ಆ ಜಿಲ್ಲೆಯ ಆಡಳಿತಾತ್ಮಕ ನ್ಯಾಯಾಧೀಶರಾಗಿದ್ದ ದಿವಂಗತ ನ್ಯಾಯಮೂರ್ತಿ ಶ್ರೀ ಇ. ಎಸ್. ವೆಂಕಟರಾಮಯ್ಯನವರು ನಿವಾಸಕ್ಕೆ ಅವರ ಆರ್ಶೀವಾದ ಪಡೆಯಲು ಹೋದೆ. ಆಗ ಅವರು ನನ್ನನ್ನು ಕಂಡ ರೀತಿ, ನೀಡಿದ ಉಪದೇಶ, ಹಿತನುಡಿ ಮತ್ತು ಆಶ್ವಾಸನೆ ನಿಜಕ್ಕೂ ಚಿರಸ್ಮರಣೀಯ. ಮೊದಲು ನನ್ನನ್ನು ಕೂಡಲು ಹೇಳಿ, ನನ್ನ

ಬಗ್ಗೆ ವಿಚಾರಿಸಿ, ನನಗೆ ಬಿಸಿ ಪಾನೀಯಕೊಟ್ಟು, ನಂತರ ನನಗೆ ಹೇಳಿದ ಮಾತನ್ನ ನಾನು ಎಂದಿಗೂ ಮರೆಯಲಾರೆ.

"ನ್ಯಾಯ ಶನಾಗಿ ಎಂದೂ ನ್ಯಾಯಾಲಯಕ್ಕೆ, ಮತ್ತು ನ್ಯಾಯಾಧೀಶನ ಹುದ್ದೆಗೆ ಯಾವುದೇ ರೀತಿ ಚ್ಯುತಿ ಬರದಂತೆ ನಡೆದುಕೊಂಡು ಹೋಗಬೇಕು. ಎಲ್ಲಿಯೇ ಆಗಲಿ ನ್ಯಾಯಾಧೀಶನ ಮೇಲೆ ಅನಾಮಧೇಯ ಪತ್ರಗಳು ಬರಬಹುದು. ಆದರೆ ಅವಕ್ಕೆಲ್ಲ ತಲೆಕೆಡಿಸಿಕೊಳ್ಳದೆ, ನ್ಯಾಯಾಧೀಶನಾಗಿ ನಿಮ್ಮ ಕೆಲಸವನ್ನು ಯಾವುದೇ ರಾಗ, ದ್ವೇಷ, ಅಸೂಯೆ ಆಮಿಷಗಳಿಗೆ ಒಳಗಾಗದೇ ನಿಮ್ಮ ಕರ್ತವ್ಯ ನೀವು ಮಾಡಿ, ಬೇರೆ ಏನಾದರೂ ತೊಂದರೆ ಇದ್ದರೆ ನನಗೆ ತಿಳಿಸಿ, ನಾನು ಅದನ್ನು ಬಗೆಹರಿಸುತ್ತೇನೆ' ಎನ್ನುವ ಮಾತು ನನ್ನ ಜೀವನದುದ್ದಕ್ಕೂ ಮಾರ್ಗದರ್ಶಿಯಾಗಿವೆ.

ಈ ಹಿತನುಡಿ ಮತ್ತು ಆಶ್ವಾಸನೆ ನನಗೆ ನಿಜಕ್ಕೂ ಸಮಾಧಾನ ನೀಡಿತ್ತು. ಮತ್ತು ನಾನು ಧೈರ್ಯವಾಗಿ ನ್ಯಾಯಾಧೀಶನ ಹುದ್ದೆಗೆ ವರದಿ ಮಾಡಿಕೊಳ್ಳಲು ಚೇತನದಾಯಕವಾಯಿತು. ನಾನು ಕಳೆದ ೨೬ ವರ್ಷಗಳಿಂದ ಅದರಂತೆ ನಡೆದುಕೊಂಡು ಬಂದಿರುತ್ತೇನೆ.

ನ್ಯಾಯಾಧೀಶನ ಕೆಲಸ ಅತ್ಯಂತ ಜವಾಬ್ದಾರಿಯುತ ಕೆಲಸ. ಎರಡೂ ಪಕ್ಷದ ವಾದ ಕೇಳಬೇಕು. ಪಕ್ಷಕಾರರು ನೀಡಿದ, ಸಾಕ್ಷ್ಯಾಧಾರದ ಮೇಲೆ, ನ್ಯಾಯವಾದಿಗಳು ಅದಕ್ಕೆ ಅನ್ವಯಿಸಿದ ಕಾನೂನನ್ನು ಪರಾಮರ್ಶಿಸಿ ನ್ಯಾಯಾಧೀಶ ತೀರ್ಪು ನೀಡಬೇಕು. ನ್ಯಾಯಾಧೀಶನ ಕಣ್ಣಿಗೆ ದಸ್ತಾವೇಜುಗಳು ಮತ್ತು ಕಾನೂನು ಮಾತ್ರ ಕಾಣಬೇಕು. ಹಾಜರಾದವರು ತನಗೆ ಆತ್ಮೀಯರೋ, ಆತ್ಮೀಯರಲ್ಲದವರೋ ಅನ್ನುವ ಮಾತು ಗೌಣವಾಗುತ್ತದೆ.

ನಾನು ನ್ಯಾಯಾಧೀಶನಾಗಿ ನೇಮಕವಾದ ಮೇಲೆ ಕೆಲವು ಮರೆಯಲಾಗದ ಘಟನೆಗಳು ನನ್ನ ನ್ಯಾಯಾಲಯದಲ್ಲಿ ನಡೆದಿವೆ. ನಾನು ವೃತ್ತಿಯಿಂದ ನಿವತ್ತನಾಗುವ ಈ ದಿನ, ಅದನ್ನು ನೆನೆಸಿಕೊಂಡರೆ ರೋಮಾಂಚನವಾಗುತ್ತದೆ.

ಒಂದು ಮೊಕದ್ದಮೆಯಲ್ಲಿ ಯಾವುದೋ ಚಿಕ್ಕ ಅಪರಾಧ ಮಾಡಿದ ಆರೋಪಿಗಳನ್ನು ನ್ಯಾಯಾಲಯಕ್ಕೆ ಕರೆತಂದಿದ್ದರು. ಕೂಲಿ ಹಂಚಿಕೊಳ್ಳುವ ವಿಷಯದಲ್ಲಿ ತಂಟೆಯಾಗಿತ್ತಂತೆ. ನ್ಯಾಯಾಲಯದ ಕೇಸಿನ ಒತ್ತಡದ ಭಾರದಿಂದಲೋ ಇನ್ನಾವದೋ ಅನಿವಾರ್ಯ ಕಾರಣಕ್ಕಾಗಿ ಕೇಸು ಮುಂದೂಡಲ್ಪಡುತ್ತಿತ್ತು. ಆರೋಪಿತರು ನ್ಯಾಯಾಂಗ ಕಸ್ಟಡಿಯಲ್ಲಿದ್ದರು. ಆರೋಪಿತರ ಪೈಕಿ ಒಬ್ಬನ ಹೆಂಡತಿ ತನ್ನ ಮಗುವನ್ನು ಕೋರ್ಟಿಗೆ ಕರೆದುಕೊಂಡು ಬಂದಿದ್ದು, ಆ ಮಗುವಿನ ತಂದೆಯ ತೊಡೆಯ ಮೇಲೆ ತನ್ನ ಮಗುವನ್ನು ಮಲಗಿಸಿದಳು. ಮಗುವಿಗೆ ಅನಾರೋಗ್ಯವಾದಾಗ, ದುಡಿತವಿಲ್ಲದೆ, ಔಷಧಿ ಕೊಡಿಸಲು ಆಗದೆ ಮಗು ಬಳಲಿತ್ತು. ತಂದೆಯಾದ ಆರೋಪಿತನು ತನ್ನ ಮಗುವನ್ನು ಪ್ರೀತಿಯಿಂದ ಮೈದಡವುತ್ತಿರುವಾಗ ನ್ಯಾಯಾಲಯದ ಎದುರಿಗೇ ತಂದೆಯ ತೊಡೆಯ ಮೇಲೆ ಮಗು ಪ್ರಾಣ ಬಿಟ್ಟಿತು. ಇದನ್ನು ಕಂಡು ನನಗೆ ಆಘಾತವಾಯಿತು. ಆ ಕೇಸಿನ ವಿವರ ತಿಳಿದುಕೊಂಡು ಕೂಡಲೇ ಅದನ್ನು ವಿಚಾರಣೆಗೆ ಎತ್ತಿಕೊಂಡೆ. ಆರೋಪಿತರು ತಪ್ಪು ಒಪ್ಪಿಕೊಂಡರು. ಅವರಿಗೆ ವಾಗ್ದಂಡನೆ ಮಾಡಿ ಕಳಿಸಿಕೊಟ್ಟೆ. ಹೀಗೆ ನ್ಯಾಯಾಧೀಶನಾಗಿ ಆ ಘಳಿಗೆಯಲ್ಲಿ ನಾನು ಕೇವಲ ಕಾನೂನಿನ ಕಟ್ಟಳೆಯಲ್ಲಿ ಕೆಲಸ ಮಾಡದೆ ಒಬ್ಬ ಮಾನವನಾಗಿ ನನ್ನ ಕರ್ತವ್ಯವನ್ನು ಮಾನವೀಯತೆಯನ್ನು ಆಧರಿಸಿ ನಿಭಾಯಿಸಿದೆ.

ಇನ್ನೊಂದು ಅವಿಸ್ಮರಣೀಯ ಘಟನೆ ಹೇಳಬೇಕೆಂದರೆ ಒಂದು ಫೌಜದಾರಿ ಮೊಕದ್ದಮೆಯಲ್ಲಿ ಒಬ್ಬ ಆರೋಪಿ ಎರಡು ವರ್ಷಗಳವರೆಗೆ ವಿಚಾರಣಾಧೀನ ಕೈದಿಯಾಗಿ ನ್ಯಾಯಾಲಯಕ್ಕೆ ಬರುತ್ತಿದ್ದ. ತನ್ನ ಕೇಸು ಪ್ರಾರಂಭವಾಗುವ ದಾರಿಯನ್ನು ಕಾಯುತ್ತಿದ್ದ. ಅವನು ನ್ಯಾಯಾಲಯಕ್ಕೆ ಬರುವಾಗ ಕೋಟ್ ಧರಿಸಿ ಬರುತ್ತಿದ್ದರು. ನಾನು ಆ ನ್ಯಾಯಾಲಯಕ್ಕೆ ಹಾಜರಾದ ಮೊದಲನೆ ದಿನ ಆ ಅಪರಾಧಿ ನನ್ನನ್ನು ಉದ್ದೇಶಿಸಿ "ಏ ನಿನಗೆ ಹೆಂಡತಿ ಮಕ್ಕಳು ಇದ್ದಾರೆಯೇ?" ಎಂದು ಏಕವಚನದಲ್ಲಿ ಜೋರಾಗಿ ಕೇಳಿದ. ನನಗೆ ಅದರಿಂದ ಮನಸ್ಸಿಗೆ ಕೂಡಲೇ ತುಂಬ ದುಃಖವಾಯಿತು. ಆದರೆ ಸಮಾಧಾನಚಿತ್ತನಾಗಿ ಆ ಕೇಸನ್ನು ಅಭಿಯೋಜಕರ ವಿನಂತಿಯ ಮೇರೆಗೆ ಮುಂದೂಡಿದೆ. ಚೇಂಬರಿಗೆ ಹೋಗಿ ಪೋಲೀಸರ ಮುಖಾಂತರ ಆ ಆರೋಪಿಯನ್ನು ಕರೆತರಲು ಹೇಳಿದೆ. ಪೊಲೀಸರು ಅನುಮಾನಿಸಿದರು.

ಆ ಆರೋಪಿಯನ್ನು ಕರೆತಂದು ನನ್ನ ಚೆಂಬರ್ಸ್‌ನಲ್ಲಿ ಬಿಟ್ಟಾಗ ಅವನ ಕೈ ಕೋಳ ತೆಗೆಯಲು ಪೊಲೀಸರಿಗೆ ಹೇಳಿದೆ. ಅನುಮಾನಿಸುತ್ತಲೇ ಕೈ ಕೋಳ ತೆಗೆದರು. ಬಾಗಿಲು ಮುಚ್ಚಿಕೊಂಡು ನೀವು ಹೊರಗೆ ಹೋಗಿ ಎಂದು ಪೊಲೀಸರಿಗೆ ಹೇಳಿದೆ. ಆ ಆರೋಪಿಯನ್ನು ಉದ್ದೇಶಿಸಿ " ನನಗೆ ಏಕ ವಚನದಲ್ಲಿ ಮಾತನಾಡಿದೆಯಲ್ಲಾ! ನನ್ನ ಮನಸ್ಸಿಗೆ ನೋವಾಗಬಹುದು ಎಂದು ನಿನಗೆ ಅನ್ನಿಸಲಿಲ್ಲವೇನು? ನಾನು ನಿನಗೆ ಮಾಡಿದ ತಪ್ಪಾದರೂ ಏನು?" ಎಂದು ಕೇಳಿದೆ. ಆತ ನಿರಪರಾಧಿಯಾದ ನನ್ನನ್ನು ಎರಡು ವರ್ಷದಿಂದ ಅಲೆದಾಡಿಸುತ್ತಿದ್ದಾರೆ. ನನಗೂ ಹೆಂಡತಿ ಮಕ್ಕಳು ಇದ್ದಾರೆ, ನನ್ನ ಮೊಕದ್ದಮೆ ಬೇಗ ತಿರ್ಮಾನಿಸಬೇಕು ಎಂದು ಯಾರೂ ಮನಸ್ಸು ಮಾಡಿಲ್ಲ ಅದಕ್ಕೆ ಹಾಗೆ ಹೇಳಿದೆ ಎಂದ. ನಾನು ಆತನನ್ನು ಸಾಂತ್ವನಗೊಳಿಸಿದಾಗ ಅವನ ಕೋಪವೆಲ್ಲಾ ಅಡಗಿತ್ತು.

ಇನ್ನೊಂದು ಸಲ ನ್ಯಾಯಾಲಯ ಪ್ರಾರಂಭವಾದಾಗ ಒಬ್ಬ ವ್ಯಕ್ತಿ ಕೈಯಲ್ಲಿ ಒಂದು ಹರಿತವಾದ ಉದ್ದನೆಯ ಚಾಕು ಹಿಡಿದುಕೊಂಡು ಬಂದು, "ಏ ನಾನು ಹೇಳಿದ್ದು ಬರೆದುಕೋ" ಎಂದು ಹೇಳಿ ಉಗ್ರವಾಗಿ ನಿಂತಿದ್ದ. ನ್ಯಾಯಾಲಯದ ಸಿಬ್ಬಂದಿ ಗಾಬರಿಯಾಗಿದ್ದರು. ನಾನು ಅವನನ್ನು ಸಮಾಧಾನ ಮಾಡಿ, ತಾನಾಗಿಯೇ ಹರಿತವಾದ ಚಾಕುವನ್ನು ಕೆಳಗಿಡುವಂತೆ ಮಾಡಿದೆ. ಅವನು ಮ ಆಡಿದ ತಪ್ಪಿನ ಅರಿವನ್ನು ಅವನಿಗೆ ಮಾಡಿಕೊಟ್ಟೆ. ಆತ ತನ್ನ ತಪ್ಪಿನ ಅರಿವಾಗಿ ವಿಷಾದ ವ್ಯಕ್ತಪಡಿಸುತ್ತಾ ಹೊರಗೆ ನಡೆದ.

ಒಂದು ಗಂಡ ಹೆಂಡತಿಯರ ವ್ಯಾಜ್ಯ ಒಂಭತ್ತು ವರ್ಷದಿಂದ ನಡೆದಿತ್ತು. ಹೆಂಡತಿ ಗಂಡನಿಗೆ ಜೀವನಾಂಶ ಕೇಳಿದ್ದಳು. ಅವರಿಗೆ ಇಬ್ಬರು ಮಕ್ಕಳಿದ್ದರು. ಒಂಭತ್ತು ಮುದ್ದತ್ತಿನಲ್ಲಿ ಪ್ರತಿಸಲ ಎರಡು ಗಂಟೆ ಅವರಿಗೆ ತಿಳಿ ಹೇಳುವುದು. ಅವರ ಮನಸ್ಸಿನಲ್ಲಿದ್ದ ಕಹಿ ಭಾವನೆ ಕಡಿಮೆಯಾಗುವಂತೆ ಮಾಡುವುದು ನನ್ನ ಕೆಲಸವಾಯಿತು.

ಎರಡು ಮಕ್ಕಳ ಮುಖಾಂತರ ಅವರಿಬ್ಬರೂ ತಾವಾಗಿಯೇ ಒಂದಾಗುವಂತೆ ಮಾಡಿದೆ. ನನಗೆ ಈ ಕೆಲಸದಲ್ಲಿ ಬೇಸರವೆನಿಸಲಿಲ್ಲ. ಆ ದಂಪತಿಗಳು ಸುಖವಾಗಿದ್ದದ್ದನ್ನು ಅವರ ವಕೀಲರ ಮುಖಾಂತರ ಕೇಳಿ ಸಂತೋಷಪಟ್ಟೆ.

ನಾನು ಜಿಲ್ಲಾ ನ್ಯಾಯಾಧೀಶನಾಗಿ ಕಾನೂನು ಸೇವಾ ಪ್ರಾಧಿಕಾರದ ಅಧ್ಯಕ್ಷನಾಗಿ ದುಡಿದದ್ದು ನನಗೆ ತುಂಬ ತೃಪ್ತಿ ತಂದಂಥ ಕೆಲಸವಾಗಿದೆ. ಹಳ್ಳಿ ಹಳ್ಳಿಗೆ ಹೋಗಿ, ಹಳ್ಳಿಯ ರೈತರಿಗೆ ಕಾನೂನಿನ ಅರಿವನ್ನು ಮಾಡಿಕೊಡುವುದು ಬಹಳ ನೆಮ್ಮದಿಯ ಕೆಲಸ

ನ್ಯಾಯವಾದಿಗಳು ನ್ಯಾಯಾಲಯದಲ್ಲಿ ಕಟ್ಟಳೆಯನ್ನು ಪೂರ್ತಿ ಅಭ್ಯಸಿಸಿ ಮುತುವರ್ಜಿಯಿಂದ ಕೇಸು ನಡೆಸಿದರೆ ನ್ಯಾಯಾಧೀಶನ ಕೆಲಸ ಹಗುರಾಗುವುದು. ಈ ಸಂದರ್ಭದಲ್ಲಿ ನಾನು ವಕೀಲ ವೃತ್ತಿಯಲ್ಲಿದ್ದ ಕಿರಿಯ ಮಿತ್ರರಿಗೆ ಒಂದು ಮಾತು ಹೇಳಲಿಚ್ಛಿಸುತ್ತೇನೆ. ವಕೀಲಿ ವೃತ್ತಿಯನ್ನು ನಿಷ್ಠೆಯಿಂದ ಮಾಡಬೇಕು. ವಕೀಲ ವೃತ್ತಿ ಸತತ ದುಡಿಮೆ, ಕರ್ತವ್ಯ ನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ಬಯಸುತ್ತದೆ. ನಾವು ಹಾಗೆ ನಡೆದುಕೊಂಡರೆ ಕಕ್ಷಿಗಾರರಿಗೂ, ನ್ಯಾಯಾಲಯಕ್ಕೂ ಕ್ಷೇಮ.

(ಶ್ರೀ ಸಿ. ಕೆ. ಬಾಲಕೃಷ್ಣರವರು ನಿವೃತ್ತರಾದ ದಿನ, ದಿನಾಂಕ 31-1-2000 ರಂದು ಬೆಳಿಗ್ಗೆ 7-25 ಕ್ಕೆ ಧಾರವಾಡ ಆಕಾಶವಾಣಿಯಲ್ಲಿ ಇದು ಬಿತ್ತರಗೊಂಡಿದೆ.) ಮುಂದಿನ ವಾರದಿಂದ ಇವರ ಲೇಖನಗಳು ಮೂಡಿ ಬರಲಿದೆ.

-ಸಂಗಾತಿ.

## ಗೌಡ ಮಹಿಳಾ ಒಕ್ಕೂಟ ಮಡಿಕೇರಿ

**12-5-2002 ರಂದು ವಾರ್ಷಿಕೋತ್ಸವ**

2000-2001 ಮತ್ತು 2001-2002 ನೇ ಸಾಲಿನ ವಾರ್ಷಿಕ ಮಹಾಸಭೆ ಮತ್ತು ತೃತೀಯ ವಾರ್ಷಿಕೋತ್ಸವವನ್ನು ಮೇ ತಿಂಗಳು 12 ನೇ ತಾರೀಖು ಆದಿತ್ಯವಾರ ಬೆಳಿಗ್ಗೆ 10-15 ಗಂಟೆಗೆ ಸರಿಯಾಗಿ ಒಕ್ಕೂಟದ ಅಧ್ಯಕ್ಷೆಯಾದ ಶ್ರೀಮತಿ ಚೀಯಂಡಿರ ರಾಧಾ ಯಾದವನವರ ಅಧ್ಯಕ್ಷತೆಯಲ್ಲಿ ಕೆಳಗಿನ ಗೌಡ ಸಮಾಜ ಮಡಿಕೇರಿಯಲ್ಲಿ ನಡೆಯಲಿದೆ. ಅದೇ ದಿನ ಪೂರ್ವಾಹ್ನ 10-45 ರಿಂದ 5-00 ಗಂಟೆಯವರೆಗೆ ವಾರ್ಷಿಕೋತ್ಸವ ಕಾರ್ಯಕ್ರಮ ನಡೆಯಲಿದೆಯೆಂದು, ಒಕ್ಕೂಟದ ಸದಸ್ಯರೆಲ್ಲರೂ ಸಮಯಕ್ಕೆ ಸರಿಯಾಗಿ ಆಗಮಿಸಿ ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ನೆರವೇರಿಸಿ ಸಹಕರಿಸಬೇಕಾಗಿ ಆಡಳಿತ ಮಂಡಳಿ ವಿನಂತಿಸಿಕೊಂಡಿದೆ.

ಅಂದಿನ ವಾರ್ಷಿಕೋತ್ಸವದ ಅಧ್ಯಕ್ಷತೆಯನ್ನು ಶ್ರೀಮತಿ ಸರಾಕುಟೇಲು ತುಳಸಿ ರಾಮಕೃಷ್ಣನವರು, ಉದ್ಘಾಟನೆಯನ್ನು ಮಡಿಕೇರಿ ಪುರಸಭಾಧ್ಯಕ್ಷೆ ಶ್ರೀಮತಿ ಕೂಡಕಂಡಿರ ಕಾವೇರಮ್ಮನವರು ಮುಖ್ಯ ಅತಿಥಿಯಾಗಿ ಶ್ರೀಮತಿ ಕೆ. ಪಿ. ಚಂದ್ರಕಲಾ, ಮಾಜಿ ಜಿಲ್ಲಾ ಪಂಚಾಯತ್ ಅಧ್ಯಕ್ಷರು, ಶ್ರೀಮತಿ ಡಾಟಿ ಸದಾನಂದಗೌಡ, ಸಮಾಜ ಸೇವಕರು, ಪುತ್ತೂರು ಹಾಗೂ ಮೈಸೂರಿನ ಗೌಡ ಮಹಿಳಾ ಒಕ್ಕೂಟದ ಅಧ್ಯಕ್ಷೆ ಶ್ರೀಮತಿ ಡಿ.ಎಸ್. ಭಾಗೀರಥಿ ಶಿವಕುಮಾರನವರು ಆಗಮಿಸಲಿದ್ದಾರೆ. ಸರ್ವರಿಗೂ ಸ್ವಾಗತವನ್ನು ಕೋರಿದ್ದಾರೆ. -ಸಂಗಾತಿ.

## ರೈಲಿನಿಂದ ಬಿದ್ದು ಕೊಡಗಿನ ಯೋಧನ ದುರ್ಮರಣ:

**ರಜೆ ನಿಮಿತ್ತ ಮನೆಗೆ ಬರುತ್ತಿದ್ದ ಸಂದರ್ಭ ದುರಂತ. ಆಂಧ್ರ ಪ್ರದೇಶದ ರಾಜ ಮಹೇಂದ್ರಿ ಬಳಿ ಘಟನೆ.**



ರಜೆಯ ನಿಮಿತ್ತ ತನ್ನ ಮನೆಗೆ ಹಿಂತಿರುಗುತ್ತಿದ್ದ ಕೊಡಗಿನ ಯೋಧನೊಬ್ಬ ಆಂಧ್ರ ಪ್ರದೇಶದ ರಾಜಮಹೇಂದ್ರಿ ಬಳಿ ಚಲಿಸುತ್ತಿದ್ದ ರೈಲಿನಿಂದ ಆಕಸ್ಮಿಕವಾಗಿ ಬಿದ್ದು ದುರ್ಮರಣ ಹೊಂದಿರುವ ಘಟನೆ 9-4-2002 ರಂದು ಸಂಭವಿಸಿದೆ. ಕಳೆದ 15 ವರ್ಷಗಳಿಂದ ಭಾರತೀಯ ಸೇನೆಯ ಟೆರಿಟೋರಿಯಲ್ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಜಿಲ್ಲೆಯ ಮರಗೋಡು ಸಮೀಪದ ಐಕೊಳದ ಕೊಂಪುಳೀರ ಕೆ. ಶೇಷಗಿರಿ (41) ಎಂಬವರೇ ದುರಂತದಲ್ಲಿ ಸಾವನ್ನಪ್ಪಿರುವ ದುರ್ದೈವಿ. ಉತ್ತರ ಪ್ರದೇಶದ ವಾರಣಾಸಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಶೇಷಗಿರಿ ಅವರು ರಜೆ ನಿಮಿತ್ತ ಮನೆಗೆ ಆಗಮಿಸುತ್ತಿದ್ದ ಸಂದರ್ಭ ಈ ದುರ್ಘಟನೆ ನಡೆದಿದೆ. ವಾರಣಾಸಿಯಿಂದ ರೈಲಿನಲ್ಲಿ ಹೊರಟಿದ್ದ ಶೇಷಗಿರಿ ಅವರು ಆಂಧ್ರ ಪ್ರದೇಶದ ರಾಜಮಹೇಂದ್ರಿ ಬಳಿ ಕೊಂಡಿಯಾಬಾರಿ ಎಂಬಲ್ಲಿ ರೈಲಿನಿಂದ ಬಿದ್ದು ಸಾವನ್ನಪ್ಪಿದ್ದಾರೆಂದು ರಾಜಮಹೇಂದ್ರಿ ರೈಲ್ವೆ ನಿಲ್ದಾಣದ ಪೊಲೀಸ್ ಅಧಿಕಾರಿಗಳು ಖಾತರಿಪಡಿಸಿದ್ದಲ್ಲದೆ. ತಾ. 9 ರಂದು ಮಧ್ಯಾಹ್ನ 3-30ರ ಸಮಯದಲ್ಲಿ ಈ ದುರಂತ ಸಂಭವಿಸಿದೆ.

ಐಕೊಳದ ಕೊಂಪುಳೀರ ಪಿ. ಕುಟ್ಟಪ್ಪ ಅವರ ಮೂರನೇ ಪುತ್ರರಾಗಿರುವ ಶೇಷಗಿರಿ ಅವರು ಕಳೆದ 15 ವರ್ಷಗಳ ಹಿಂದೆ ಸೇನೆಗೆ ಸೇರಿದ್ದರು. ಕಳೆದ ಎಂಟು ವರ್ಷಗಳ ಹಿಂದೆ ಇವರ ಸಹೋದರ ಕೊಂಪುಳಿರ ಮೇದಪ್ಪ ಅವರು ಸೇನೆಯಲ್ಲಿ ಸೇವೆಯಲ್ಲಿದ್ದ ಸಂದರ್ಭವೇ ಹುತಾತ್ಮರಾಗಿದ್ದರು. ಈಗ್ಗೆ 4 ತಿಂಗಳ ಹಿಂದೆಯಷ್ಟೆ ಮನೆಗೆ ಬಂದು ಕರ್ತವ್ಯಕ್ಕೆ ತೆರಳಿದ್ದು, ಇದೇ ಆಗಸ್ಟ್‌ನಲ್ಲಿ ಸೇವೆಯಿಂದ ನಿವೃತ್ತಿ ಹೊಂದಲಿದ್ದರೆಂದು ಕುಟುಂಬದ ಮೂಲಗಳು ತಿಳಿಸಿವೆ.

**ಬಂಧುಗಳ ಆಕ್ರಂದನದ ನಡುವೆ ಪಾರ್ಥಿವ ಶರೀರ ಅಗ್ನಿಗೆ ಆಹುತಿ. ದುರುತ ಸಾವಿನ ನಡುವೆ ಗೌರವ ನೀಡದ ನೋವು.**

ಹೊಸ ವರ್ಷದ ಸಂಭ್ರಮದಲ್ಲಿ ಯುಗಾದಿ ಆಚರಣೆಗೆಂದು ಸೇನೆಯಲ್ಲಿ ರಜೆ ಪಡೆದು ಹುಟ್ಟೂರಿಗೆ ಬರುತ್ತಿದ್ದ ಸಂದರ್ಭ, ಮಾರ್ಗ ಮಧ್ಯೆ ರೈಲಿನಿಂದ ಬಿದ್ದು ದುರಂತ ಸಾವೀಗೀಡಾದ ಯೋಧ ಹಾಗೂ ಐಕೊಳ ಗ್ರಾಮದ ಕೊಂಪುಳಿದ ಕೆ. ಶೇಷಗಿರಿ (41)

ಅವರ ಅಂತ್ಯ ಸಂಸ್ಕಾರ ದಿ. 13 ರಂದು ಹುಟ್ಟೂರಿನಲ್ಲಿ ನಡೆಯಿತು.

ತಾ. 9 ರ ಬೆಳಿಗ್ಗೆ ಆಂಧ್ರ ಪ್ರದೇಶದ ರಾಜಮುದ್ರಿ ಎಂಬಲ್ಲಿ ರೈಲು ಪ್ರಯಾಣದ ವೇಳೆ ಆಕಸ್ಮಿಕ ಬಿದ್ದು ಪ್ರಾಣ ಕಳೆದುಕೊಂಡಿದ್ದ ಶೇಷಗಿರಿ ಅವರ ಪ್ರಾರ್ಥಿವ ಶರೀರವನ್ನು ರಾಜಮುಂದ್ರಿ ಜಿಲ್ಲಾ ಆಸ್ಪತ್ರೆಯಲ್ಲಿ ಮರಣೋತ್ತರ ಪರೀಕ್ಷೆ ಬಳಿಕ ನೆನ್ನೆ ಅಪರಾಹ್ನ 2 ಗಂಟೆ ಸುಮಾರಿಗೆ ಖಾಸಗಿ ವಾಹನದಲ್ಲಿ ಮೃತರ ಸಹೋದರ ತಂದಾಗ ಬಂಧುಗಳ ರೋಧನ ಕರುಳು ಹಿಂಡುವಂತಿತ್ತು.

ಮೃತ ಶೇಷಗಿರಿ ಅವರ ಪ್ರಾರ್ಥಿವ ಶರೀರವನ್ನು ಗ್ರಾಮಸ್ಥರು ಹಾಗೂ ಬಂಧುಮಿತ್ತರರು ಅಂತಿಮ ನಮನ ಸಲ್ಲಿಸಿದ ಬಳಿಕ ಕೊಂಪುಳಿರ ಕುಟುಂಬದ ಸ್ಮಶಾನದಲ್ಲಿ ಚಿತೆಗೇರಿಸುವ ಮೂಲಕ, ಮೃತರ ಪತ್ನಿ ಮಮತ ಅಗ್ನಿ ಸ್ಪರ್ಶ ನೀಡಿದರು.

ಇತ್ತೀಚಿನ ವರ್ಷಗಳ ತನಕ ಸೇನೆಯಲ್ಲಿ ಬೆಂಗಳೂರು ಜಾಲ ಹಳ್ಳಿ ಕೇಂದ್ರದಲ್ಲಿ ಕರ್ತವ್ಯ ನಿರ್ವಹಿಸುವುದರೊಂದಿಗೆ ಆರು ತಿಂಗಳ ಹಿಂದೆಯಷ್ಟೇ ಒರಿಸ್ಸಾದ ಬಾಲಸೂರು ಕ್ಷಿಪಣಿ ಪರೀಕ್ಷಾ ಕೇಂದ್ರಕ್ಕೆ ವರ್ಗಾವಣೆಗೊಂಡಿದ್ದ ಶೇಷಗಿರಿ ಅವರು ಯುಗಾದಿಯ ಸಂತಸಕ್ಕೆ ಬದಲಾಗಿ ಇಡೀ ಕುಟುಂಬವನ್ನು ದುಃಖ ಸಾಗರಕ್ಕೆ ತಳ್ಳಿದ್ದಾರೆ.

ಅವರ ಪತ್ನಿ ಮಮತ ಹೊಸೊಕ್ಲು ಮಮತ ಅವರು ಬೆಂಗಳೂರಿನ ಖಾಸಗಿ ಸಂಸ್ಥೆಯೊಂದರ ಉದ್ಯೋಗಿಯಾಗಿದ್ದು, ಒಂದೂವರೆ ವರ್ಷದ ಮಗು ಅಮೂಲ್ಯಳೊಂದಿಗೆ, ಇದೀಗ ಐದು ತಿಂಗಳ ಗರ್ಭಿಣಿಯಾಗಿದ್ದು, ಶೇಷಗಿರ ಅವರ ಅಗಲಿಕೆಯಿಂದ ಚೇತರಿಸಿ ಕೊಳ್ಳಲಾರದ ಶೋಕದಲ್ಲಿ ಮುಳುಗುವಂತಾಗಿದೆ. ಈ ನಡುವೆ ದುರಂತ ಸಾವು ಕಂಡಿರುವ ಶೇಷಗಿರಿ ಅವರ ಅಂತ್ಯಕ್ರಿಯೆ ವೇಳೆ ಪೊಲೀಸ್ ಇಲಾಖೆ ಅಥವಾ ಜಿಲ್ಲಾ ಆಡಳಿತದಿಂದ ಯಾರೊಬ್ಬರು ಪಾಲ್ಗೊಳ್ಳದೆ, ಯಾವುದೇ ಸರಕಾರಿ ಮರ್ಯಾದೆ ನೀಡಲಿಲ್ಲ ಎನ್ನುವ ಕೊರಗು ಗ್ರಾಮಸ್ಥರಲ್ಲಿ ದುಃಖವನ್ನುಂಟು ಮಾಡಿದೆ.

ಯೋಧ ಶೇಷಗಿರಿ ಅವರು ಆಂಧ್ರ ಪ್ರದೇಶದ ದ್ವಾರಪುಡಿ ಕಡಿಯಂ ಎಂಬಲ್ಲಿ 'ಸಿಕಂದ್ರಾಬಾದ್ ಎಕ್ಸ್‌ಪ್ರೆಸ್ ರೈಲಿನಲ್ಲಿ ಪ್ರಯಾಣ ಆರಂಭಿಸಿದ 4 ಗಂಟೆಗಳಲ್ಲೇ ದುರಂತ ಸಾವು ಎದುರಾಗಿದ್ದು, ದೇಶ ರಕ್ಷಣೆಗಾಗಿ ಸಮರ್ಪಿಸಿಕೊಂಡಿದ್ದ ಅವರ ಅನಿರೀಕ್ಷಿತ ಅಗಲಿಕೆ ತಂದೆ-ತಾಯಿ ಹಾಗೂ ಸಹೋದರರಲ್ಲೂ ದೃತಿಗೆಡಿಸಿದೆ. ಕೊಡಗಿಗೆ ಒಂದು ತರದ ದುರಂತವೇ ಸರಿ.

ವರದಿ: ಬಿ. ಎಂ. ಲವಕುಮಾರ್,

## "ಬ್ಯಾರಿ ಮುಸ್ಲಿಮರು" ಒಂದು ಸಮೂಹ ಶೋಧ ಕೃತಿ:- ಪುಸ್ತಕ

ಬ್ಯಾರಿ ಜನಾಂಗ ಯಾರಿಗೂ ಅಪರಿಚಿತರಲ್ಲ. ಶತಕಗಳ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಗೆ ವ್ಯಾಪಾರಸ್ಥರಾಗಿ ಬಂದು ತಾವು ಪಡೆದ ಭೂಮಿಯಲ್ಲಿ ಬೆವರು ಸುರಿಸಿ ದುಡಿದು ತಮ್ಮ ಬಾಳ್ವೆಗೊಂದು ನೆಲೆ ಕಂಡುಕೊಂಡ ಶ್ರಮಜೀವಿಗಳಿವರು. ಹಲವು ಜಾತಿಮತ ಧರ್ಮ-ಸಂಸ್ಕೃತಿಗಳ ನಡುವೆ ಇದ್ದರೂ ವಿವಿಧತೆಯಲ್ಲಿ ಏಕತೆಯನ್ನು ಉಳಿಸಿಕೊಂಡಿರುವ ಈ ಜನಾಂಗ ತಮ್ಮತನವನ್ನು ಒಂದಿಷ್ಟೂ ಕಳೆದುಕೊಂಡವರಲ್ಲ. ದಕ್ಷಿಣ ಕನ್ನಡದ ಮುಸ್ಲಿಮರಲ್ಲಿ 100 ರಲ್ಲಿ 80 ಕ್ಕೂ ಹೆಚ್ಚಿನ ಜನ ಬ್ಯಾರಿಗಳು. ಈ ಜನಾಂಗದ ಮೂಲ ನೆಲೆ ದಕ್ಷಿಣ ಕನ್ನಡವಾಗಿದ್ದರೂ ಈಗ ಕೊಡಗು, ಶಿವಮೊಗ್ಗ, ಚಿಕ್ಕಮಗಳೂರಿನಂತಹ ನಗರಗಳಲ್ಲೂ ಹಬ್ಬಿಕೊಂಡಿದ್ದಾರೆ. ಒಂದು ಕಾಲದಲ್ಲಿ ಬ್ಯಾರಿಗಳನ್ನು ಕೀಳುಭಾವನೆಯಿಂದ ನೋಡುವವರಿದ್ದರು. ಆದರೆ, ಈಗ ಪರಿಸ್ಥಿತಿ ಬದಲಾಗಿದೆ. ಬ್ಯಾರಿ ಜನಾಂಗದ ವ್ಯಕ್ತಿಗಳು ಇಂದು ಎಲ್ಲ ರಂಗದಲ್ಲೂ ಕಾಣಸಿಗುತ್ತಾರೆ. ಅನೇಕ ಲೇಖಕರನ್ನು, ಸಾಹಿತಿಗಳನ್ನು, ಪ್ರಸಿದ್ಧ ಕಲಾವಿದರನ್ನು ಸಮಾಜಕ್ಕೆ ಅರ್ಪಿಸಿದ ಕೀರ್ತಿ ಬ್ಯಾರಿ ಜನಾಂಗಕ್ಕಿದೆ ಎಂದು ಎದೆ ತಟ್ಟಿ ಹೇಳಬಹುದು. ಬ್ಯಾರಿಗಳಿಗೆ ತಮ್ಮದೇ ಆದ ಪರಂಪರೆಗಳಿವೆ. ಕವಿಗಳಿಂದ ಹಿಡಿದು ಸಮಾಜ ಶಾಸ್ತ್ರಜ್ಞರವರೆಗೆ ಎಲ್ಲ ವಿಭಾಗದವರನ್ನು ಆಕರ್ಷಿಸುವ ಗುಣಗಳಿವೆ.

ಅನೇಕ ಕೃತಿಗಳು ಬ್ಯಾರಿ ಜನಾಂಗದ ಕುರಿತು ಬರೆಯಲ್ಪಟ್ಟಿವೆ. ಈ ಜನಾಂಗದ ಚಾರಿತ್ರಿಕ, ಸಾಮಾಜಿಕ ವೈಶಿಷ್ಟ್ಯತೆಗಳನ್ನು ದಾಖಲು ಮಾಡುವ ಮಹತ್ವದ ಕೃತಿಯೊಂದನ್ನು ಯುವ ಬರಹಗಾರ, ಪತ್ರಕರ್ತ ಹಂಝ ಮಲಾರವರು ಇತ್ತೀಚೆಗೆ ಹೊರ ತಂದಿದ್ದಾರೆ. ಬ್ಯಾರಿಗಳ ಸಾಮಾಜಿಕ ಚಾರಿತ್ರಿಕ, ಪ್ರತ್ಯೇಕತೆಯ ಬಗ್ಗೆ ಅರಿವು ಮೂಡಿಸುವ ಇಂಥ ಕೃತಿಗಳು ಸದಾ ಸ್ವಾಗತಾರ್ಹ, ಬ್ಯಾರಿ ಜನಾಂಗದ ಜೀವನ ಶೈಲಿ ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ನಿಲುವುಗಳು ಆರಾಧನೆ ಮತ್ತು ಆಚಾರ ವಿಚಾರಗಳ ಬಗ್ಗೆ ಲೇಖಕ ಹಂಝ ಮಲಾರ್‌ರವರು ಸಾಧ್ಯವಾದಷ್ಟು ಮಟ್ಟಿಗೆ ಮಾಹಿತಿ ಸಂಗ್ರಹಿಸಿ ಓದುಗರ ಮುಂದಿಟ್ಟಿದ್ದಾರೆ. ಬ್ಯಾರಿ ಸಮುದಾಯದ ಪ್ರಮುಖರ ಸೇವೆ ಸಾಧನೆಗಳನ್ನು ತಮ್ಮ ಬರಹದಲ್ಲಿ ವಿವರವಾಗಿ ಚರ್ಚಿಸಿದ್ದಾರೆ. ಅಲ್ಲದೆ ಬ್ಯಾರಿ ಎಂಬ ಪದದ ಮೂಲವೇನು? ಏನಿದರರ್ಥ? ಅದರ ಉತ್ಪತ್ತಿ ಎಲ್ಲಿಂದ ಮತ್ತು ಯಾವಾಗ ಆಯಿತು ಎಂಬ ಬಗ್ಗೆ ಲೇಖಕರು ಕೆಲವು ಬುದ್ಧಿ ಜೀವಿಗಳ ಅಭಿಪ್ರಾಯಗಳನ್ನು ಉಲ್ಲೇಖಿಸಿದ್ದಾರೆ. ಅವುಗಳಲ್ಲಿ ಹೆಚ್ಚಿನ ಅಭಿಪ್ರಾಯಗಳ ಪೌರಾಣಿಕ ಹಿನ್ನಲೆಯನ್ನು ಪುಷ್ಟೀಕರೀಸುತ್ತದೆಯಾದರೂ ಪ್ರೊ|| ಬಿ. ಎಂ. ಇಚ್ಲಂಗೋಡ್, ಡಾ. ವಹಾಬ್ ದೊಡ್ಡಮನೆ ಮುಂತಾದವರು ಬ್ಯಾರಿ ಎಂಬ ಪದ ತುಳು ಭಾಷೆಯ 'ಬ್ಯಾರ ದಿಂದ ಬಂದಿರುವುದೆಂದು ಅಭಿಪ್ರಾಯಪಟ್ಟಿದ್ದಾರೆ. ಈ ಅಭಿಪ್ರಾಯ

ಪ್ರಕಾರ ಬ್ಯಾರಿಗಳು ಕೇರಳದ ಮಾಪಿಲ ವರ್ಗದಿಂದ ಬಂದವರೆಂಬ ತಪ್ಪು ಭಾವನೆ ದೂರವಾಗುತ್ತದೆ. ಸಮುದ್ರದ ಮೂಲಕ ವ್ಯಾಪಾರ ಮಾಡುವವರನ್ನು ಅರಬಿಯಲ್ಲಿ 'ಬಿಹಾರಿ' ಎಂದು ಹೇಳಲಾಗುತ್ತಿದ್ದು, ಇದು ಕ್ರಮೇಣ ಬ್ಯಾರಿ ಎಂಬ ಪದಚಾಲ್ತಿಗೆ ಬಂದಿದೆ ಎಂದು ಹೇಳುವವರೂ ಇದ್ದಾರೆ. ಆದರೆ ಬ್ಯಾರಿ ಎಂಬ ಪದ ಬಳಕೆ ಕೇವಲ ತುಳುನಾಡಿನಲ್ಲಿ ಕಂಡು ಬಂದ ಕಾರಣ ಹಾಗೂ 'ಬ್ಯಾರ'ವನ್ನೆ ಮೆಚ್ಚಿಕೊಂಡವರನ್ನು ತುಳುವರು ಬ್ಯಾರಿ ಎಂದು ಕರೆದಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ ಎನ್ನುತ್ತಾರೆ. ಲೇಖಕರು. ಅವರ ಪ್ರಕಾರ ಬ್ಯಾರಿ ಎಂಬ ಹೆಸರಿನ ಮೂಲ ತುಳು ಭಾಷೆಯ ಬ್ಯಾರವೇ ಆಗಿದೆ. ಬ್ಯಾರಿ ಪದದ ಬಗ್ಗೆ ಇದ್ದಂತೆ ಬ್ಯಾರಿ ಲಿಪಿಯ ಬಗ್ಗೆಯೂ ಭಿನ್ನಮತವಿರುವುದನ್ನು ವಿವರಿಸುವ ಲೇಖಕರು 'ಬ್ಯಾರಿ ಲಿಪಿಯ ಆಳವಾದ ಸಂಶೋಧನೆ ನಡೆಯಬೇಕಿದೆ ಎನ್ನುತ್ತಾರೆ. ಬ್ಯಾರಿ ಜನಾಂಗವು ಇಸ್ಲಾಮಿನ ಒಂದು ಭಾಗವೇ ಆಗಿದ್ದರೂ ಹಿಂದೆ ನೀತಿ ಬ್ಯಾರಿ ಹಾಗೂ ಶೆಟ್ಟಿ ಬ್ಯಾರಿ ಎಂಬ ಎರಡು ಪಂಗಡಗಳು ಇದ್ದವೆಂದು ಹಿರಿಯ ಸಂಶೋಧಕ ಬಿ. ಎಂ. ಇಚ್ಲಂಗೋಡ್ ಅಭಿಪ್ರಾಯ ಪಟ್ಟಿದ್ದಾರೆ. ನೀತಿ ಬ್ಯಾರಿ ಎಂದರೆ ದಾರಿ ತಪ್ಪದ ಬ್ಯಾರಿಗಳು ಶೆಟ್ಟಿ ಬ್ಯಾರಿ ಎಂದರೆ ದಾರಿ ತಪ್ಪಿದ ಬ್ಯಾರಿಗಳೆಂದು ಹೇಳಲಾಗುತ್ತಿದೆ. ಬ್ಯಾರಿ ಜನಾಂಗದಲ್ಲಿ ಕಾಣಿಸಿಕೊಂಡ ಈ ವಿಭಾಗೀಯತೆಯು ಕೇವಲ ಧಾರ್ಮಿಕ ವಿಷಯಕ್ಕೆ ಸಂಬಂಧಿಸಿದ ಅಭಿಪ್ರಾಯ ಭಿನ್ನತೆಯಂತೆ ಎಂದು ಅವರು ವಿಶ್ಲೇಷಿಸುತ್ತಾರೆ. ಬ್ಯಾರಿ ಜನಾಂಗದ ಇಸ್ಲಾಮಿಕ್ ವಲಯವನ್ನು ಚೆನ್ನಾಗಿ ಪರಿಚಯ ಮಾಡಿಕೊಡುವ ಲೇಖಕರು ಈ ಕೃತಿಯಲ್ಲಿ ಕೇವಲ ಬ್ಯಾರಿಗಳಿಗೆ ಮಾತ್ರ ಸಂಬಂಧಿಸಿದೆ. ಇಡೀಯ ಮುಸ್ಲಿಂ ಬಾಂಧವರಿಗೆ ಅನ್ವಯಿಸುವ ಕೆಲವು ವಿಷಯಗಳನ್ನು ಅಳವಡಿಸಿಕೊಂಡಿದ್ದಾರೆ. ಇವು ಕೃತಿಯ ಪ್ರತಿಪಾದ್ಯ ವಿಷಯಕ್ಕೆ ಹೊರತಾಗಿರುವುದರಿಂದ ಕೇವಲ ಬ್ಯಾರಿ ಜನಾಂಗದಲ್ಲಿ ಮಾತ್ರ ಚಾಲ್ತಿಯಲ್ಲಿರುವ ಆಚಾರ ವಿಚಾರಗಳನ್ನು ದಾಖಲಿಸಿದರೆ ಪ್ರತಿಯು ಇನ್ನಷ್ಟು ವಿಫಲಗೊಳ್ಳುತ್ತಿತ್ತು. ಪುಸ್ತಕದ ವಿಷಯ ನಿರೂಪಣಾ ಶೈಲಿ ಮೆಚ್ಚುವಂತಿದ್ದು ಸಾಮಾನ್ಯ ಓದುಗರಿಗೂ ಸುಲಭದಲ್ಲಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುವಂತೆ ಇದರ ಭಾಷೆ ಇದೆ. ಬ್ಯಾರಿ ಸಮಾಜದ ವಿವಿಧ ಮಗ್ಗುಲಗಳನ್ನು ಓದುಗರಿಗೆ ಪರಿಚಯಿಸುವ ಹಂಝ ಮಲಾರ್ ರವರ ಪ್ರಯತ್ನ ಪ್ರಶಂಸನೀಯವಾಗಿದೆ.

- ಕೃಪೆ: ಫಿರ್ಜಾಸ್, ಎಂ. ಇ. ಆಶ್ರಫ್ ಮುಸ್ಲಿಯಾರ್

## ಸಂಸ್ಕೃತಿಯ ಉಳಿವಿಗೆ ಗೌಡ ಜನಾಂಗ ಒಗ್ಗೂಡಬೇಕಿದೆ

**ಕಾವೇರಮ್ಮ ಸೋಮಣ್ಣ ಅನಿಸಿಕೆ.**

ಪಾಶ್ಚಾತ್ಯ ಸಂಸ್ಕೃತಿಯ ಅಂಧಾನುಕರಣೆಯಿಂದ ಪರಂಪರಾಗತವಾಗಿ ನಡೆದು ಬಂದಿರುವ ಗೌಡ ಜನಾಂಗದ ಸಂಸ್ಕೃತಿ ಹಾಗೂ ಪರಂಪರೆ ವಿನಾಶದ ಅಂಚಿನಲ್ಲಿದ್ದು, ಸಂಸ್ಕೃತಿಯ ಉಳಿವಿಗೆ ಜನಾಂಗದ ಸರ್ವಸದಸ್ಯರೂ ಒಗ್ಗೂಡಿ ಶ್ರಮಿಸಬೇಕಿದೆ ಎಂದು ಮಡಿಕೇರಿ ಪುರಸಭಾಧ್ಯಕ್ಷೆ ಕಾವೇರಮ್ಮ ಸೋಮಣ್ಣ ತಮ್ಮ ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ಗೌಡ ಸಂಸ್ಕೃತಿಯ ಅಕಾಡೆಮಿ ಆಶ್ರಯದಲ್ಲಿ ತಾ. 24 ರಂದು ಗೌಡ ಸಮಾಜದಲ್ಲಿ ನಡೆದ ಚರ್ಚಾ ಗೋಷ್ಠಿಯನ್ನು ಉದ್ಘಾಟಿಸಿ ಅವರು ಮಾತನಾಡುತ್ತಿದ್ದರು. ಮುಖ್ಯ ಅತಿಥಿಗಳಾಗಿ ಉಪಸ್ಥಿತರಿದ್ದ ಕೊಡಗು ಸುಳ್ಯ ಗೌಡ ಅಭಿವೃದ್ಧಿ ಸಂಘದ ಮಾಜಿ ಅಧ್ಯಕ್ಷ ಬಾಲಕೃಷ್ಣ ಮಾತನಾಡಿ, ಗೌಡ ಜನಾಂಗ ಒಗ್ಗಟ್ಟಿನಿಂದ ಕಾರ್ಯನಿರ್ವಹಿಸಬೇಕಾದ ಅಗತ್ಯವಿದೆ ಎಂದರು.

ಸಭಾಧ್ಯಕ್ಷತೆಯನ್ನು ಗೌಡ ಜನಾಂಗದ ಹಿರಿಯ ಮುತ್ಸದ್ದಿ ಮಾಡಿ ವಾಯು ಸೇವಾಧಿ ಕೊಡಕಂಡಿರ ಗಿರಿ ಅಪ್ಪಾಜಿಯವರು ವಹಿಸಿದ್ದರು. ಕಾರ್ಯಕ್ರಮದಲ್ಲಿ ವೇಣುಗೋಪಾಲ್ ಉಪಸ್ಥಿತರಿದ್ದರು. ಕೊಡಗು ಗೌಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷ ತುಂತಜೆ ಗಣೇಶ್ ಸ್ವಾಗತಿಸಿದರೆ, ನಿರ್ದೇಶಕಿ ದಂಬೆಕೋಡಿ ರಾಣಿ ಮಾಚಯ್ಯ ಪ್ರಾರ್ಥಿಸಿದರು. ಅಕಾಡೆಮಿ ಕಾರ್ಯದರ್ಶಿ ಕೋಡಿ ಚಂದ್ರಶೇಖರ್ ಕಾರ್ಯಕ್ರಮ ನಿರೂಪಿಸಿದರು.

-ಸಂಗಾತಿ

## ಮಹಾಚೇತನ!!!

ಓ ನನ್ನ ಸಂಗಾತಿಯೇ
ನೀ ನನ್ನ ಮಹಚೇತನ
ಅನುದಿನವೂ ನಿನ್ನ ಆಗಮನ

ಈ ಕಣ್ಣಲ್ಲಿ ಅಡಗಿದೆ ನಿನ್ನ ಚಿತ್ರ
ಈ ಜೀವದಲ್ಲಿ ಬೆರಿತಿದೆ ಸರ್ವವು
ನಿನ್ನನ್ನೊಮ್ಮೆ ನೋಡಿದರೆ

ನನಗಾಗುವುದು ಮಹಾಚೇತನ
ಭವ್ಯ ಚೆಲುವ ನಾಡಿನ ಐಸಿರಿ
ದಿವ್ಯ ಶಕ್ತಿಯಾಗಿ ಅನುದಿನವು

ನಂದಾದೀವಿಗೆಯಾಗಿ ಎಂದೆಂದು
ಶುಭ ಹಾರೈಸುವೆ ದಿನ ದಿನವು
ಓ ನನ್ನ ಸಂಗಾತಿಯೇ
ನಿ ನನ್ನ ಮಹಾ ಚೇತನ

- ಕೊಟ್ಟಕೇರಿಯನ ಉಷಾ, ಬಲಮುರಿ



**ಸಂಗಾತಿಯನ್ನು ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.**

ದಾಕ್ಷಿಣ್ಯದ ದಾಸ, ಹೊಟ್ಟೆಗೆ ಉಪವಾಸ

# ನಮ್ಮ ಜನ್ಮ ಭೂಮಿ ಸ್ವರ್ಗ, ನಮ್ಮ ಸಂಸ್ಕೃತಿ ಜ್ಯೋತಿ:- ಆ ಜ್ಯೋತಿ ಬೆಳಗಲಿ!

ಚರಿತ್ರೆ.... ತ ಕಾಲದ ವೈಭವಗಳನ್ನು ಸೂಚಿಸುತ್ತದೆ. ಅದನ್ನು ನಾವು 'History' ಎನ್ನುತ್ತೇವೆ. History ಎಂದರೆ His+story = History.

ಇಲ್ಲಿ ಎಂದು 'S' ಲೋಪವಾಗುತ್ತದೆ. 'History' ಕಲಿಯುವುದು ನಾವು ನಮ್ಮಲ್ಲಿ ದೋಷಗಳನ್ನು ಕಡಿಮೆ ಮಾಡುವುದಕ್ಕೆ ಹಿಂದೂ ದೇಶದ ಚರಿತ್ರೆಯಲ್ಲಿ ನಾವು ರಾಮನ ವಿಚಾರ ಕೇಳಿರುವೆವು. ಹತ್ತು ತಲೆಯ ರಾವಣನೋ ಹತ್ತು ದುರ್ಬುದ್ಧಿಯ ರಾವಣನೋ ಅಂತೂ ಅವನು ಒಳ್ಳೆಯ ಬುದ್ಧಿಯವನೆಂದು ಗೊತ್ತಾಗುತ್ತದೆ. ಅವನು ಸೀತೆಯನ್ನು ಅಪಹರಿಸಿದ. ಅದು ರಾಮಾಯಣವಾಯಿತು. ದುರ್ಯೋಧನನು ತನ್ನ ತಮ್ಮಂದಿರಿಗೆ ಸೂಜಿ ಮೊನೆಯಾಗುವಷ್ಟು ಜಮೀನನ್ನು ಕೊಡುವುದಿಲ್ಲವೆಂದು ನುಡಿದ. ದ್ರೌಪದಿಯ ಮಾನಭಂಗಮಾಡಿಸಿ, ತಮ್ಮ ತೊಡೆಯಲ್ಲಿ ಕೂರಿಸಲು ಆಸೆಪಟ್ಟ. ಅದು ಮಹಾಭಾರತವಾಯಿತು. ಕಂಸನೆಂಬವನು ಶಿಶು ಹತ್ಯೆಗೈದ. ಅವನೀಗೇನಾಯಿತು? ಟಿಪ್ಪು ಸುಲ್ತಾಮ್ ಕೊಡಗನ್ನು ಲೂಟಿ ಮಾಡಿ ಮತಾಂತನೆನಿಸಿದ. ದುಷ್ಟನಾಗಿ ರಾರಾಜಿಸಿದ ಅನಾಥನಾಗಿ ಸತ್ತ. ಚಿಕ್ಕ ವೀರರಾಜ ಮದವೇರಿ ಅಟ್ಟಹಾಸಗೈದ. ಮಹಿಳೆಯರೆಲ್ಲರೂ ಅವನಿಗಾಗಿಯೇ ಎಂದು ಮೆರೆದ. ಇಂದು ಒಸಮಾ-ಬಿನ್-ಲಾಡೆನ್ ವಿಶ್ವವನ್ನು ಇಸ್ಲಾಂ ಮಾಡ ಹೊರಟ. ಇಲ್ಲಿಯವರೆಗೆ ಅವನು ಸಿಕ್ಕಿಲ್ಲ. ಆದರೆ ಅವರ ದೇಶ ಅಫ್‌ಘನಿಸ್ತಾನ ಏನಾಯಿತು? ಅವರೆಲ್ಲಾ ತಮ್ಮ ಅಂತ್ಯಕಾಲದಲ್ಲಿ ಏನನ್ನು ಕೊಂಡು ಹೋದರು? ಭೂಮಿಗೆ ಬರುವಾಗ ಏನನ್ನು ತಂದರು? ಇದನ್ನೆಲ್ಲಾ ಓದಿ, ತಿಳಿದು, ಕೇಳಿ ತಿಳಿದು ಇಂದು ನಾವು ಏನು ಮಾಡುತ್ತಿದ್ದೇವೆ? ನಾವು ಜೀವಿಸುತ್ತಿರುವ ಜೀವನ ನಮಗೆ ತೃಪ್ತಿ ತುದಿದೆಯೇ? ನಮ್ಮನ್ನು ನಾವು ತಿಳಿದುಕೊಳ್ಳುವುದು ಉಚಿತ, ಮತ್ತು ಉತ್ತಮ.

ಸತ್ಯಂ ಪ್ರಿಯಂ, ಪ್ರಿಯಂ, ಸತ್ಯಂ ಎನ್ನುತ್ತಾರೆ. ಅಂದರೆ ನಮ್ಮ ಬಾಳ್ವೆಗೆ ಸತ್ಯವೇ ಅಡಿಪಾಯ. ಪ್ರೀತಿಯೇ ಹೊದಿಕೆ. ಚೈತನ್ಯವೇ ಜೀವನ. ತೃಪ್ತಿಯೇ ನಿದ್ರೆ. ಇದು ಭಾರತದ ಸಂಸ್ಕೃತಿ ಭಾರತೀಯರು ಇದನ್ನು ಅರಿತರು. ಜೀವನದಲ್ಲಿ ಅಳವಡಿಸಿದರು. ಲೋಕಕ್ಕೆ ಸಾರಿದರು. ಭಾರತೀಯರೆಂಬ ಹೆಗ್ಗಳಿಕೆಯನ್ನು ಗಳಿಸಿದರು. ಸರ್ವೇಜನ ಸುಖಿನೋ ಭವಂತು ಎಂದೇ ಉಸಿರಾಡಿದರು. ಅಂದಿನ ಹೆಮ್ಮೆಯ ಭಾರತವನ್ನು ಇಂದು ಎಮ್ಮೆಗಳಾದ ಎಂಮ್ಮೆಲ್ಲೆಗಳು ಆಳುತ್ತಿದ್ದಾರೆ. ಹೆಮ್ಮೆ ಎಲ್ಲಿ? ಎಮ್ಮೆ ಎಲ್ಲಿ?

ಧರ್ಮ ನಿರಪೇಕ್ಷ ಎಂದು ಧರ್ಮವನ್ನು ಅಲಕ್ಷಿಸಿದ್ದಾರೆ. ಧರ್ಮವನ್ನು ಅಲಕ್ಷಿಸುದೆಂದರೆ ಸತ್ಯವನ್ನು ಕೈ ಬಿಟ್ಟಂತೆ! ನಮ್ಮ ಸರಕಾರಕ್ಕೆ ಸತ್ಯ ಮತ್ತು ಧರ್ಮ ಒಂದು ಶಾಪವಿದ್ದಂತೆ. ಅಧಿಕಾರ ಮತ್ತು ಲಂಚ ಅವರಿಗೊಂದು ವರ. ಅದನ್ನು ವೈಭವೀಕರಿಸಲು ನಮ್ಮ ಮತ(Vote). ಇದರಿಂದ ನಮ್ಮ ಗೋರಿಯನ್ನು ನಾವೇ ತೋಡಿಕೊಳ್ಳುತ್ತೇವೆ. ಈ ಪಾತಕದಿಂದ ನಾವು ಉದ್ಧಾರವಾಗಬೇಕು. ನಮ್ಮಲ್ಲಿ ನಮಗೆ ಸತ್ಯ, ಧರ್ಮದ ಅರಿವಾಗಬೇಕು. ನಾನು ಎಂಬುದು ನಾವು ಆಗಬೇಕು.

ನಮ್ಮ ಸಂಸ್ಕೃತಿಯನ್ನು ನಾವು ಮರೆತಿದ್ದೇವೆ. ನಮ್ಮ ಸಂಸ್ಕೃತಿಯನ್ನು ನಾವೇ ಮರೆತರೆ ನಮ್ಮಲ್ಲಿ ಉಳಿಯುವುದು ಏನು? ಸಂಸ್ಕೃತಿಯನ್ನು ಕಳೆದುಕೊಂಡರೆ ಜೀವನವನ್ನೇ ಕಳೆದುಕೊಳ್ಳುತ್ತೇವೆ. ಸಂಸ್ಕೃತಿಯನ್ನು ಉಳಿಸಬೇಕು. ಬೆಳೆಸಬೇಕು, ಅಮೂಲ್ಯವಾಗಿ ಕಾಪಾಡಬೇಕು. ಸಂಸ್ಕೃತಿಯ ಪಾಲನೆ, ಪೋಷಣೆ, ನಿರ್ವಹಣೆಗೆ ಅಡಿಪಾಯ ಹೊತ್ತು ಹೆತ್ತ ತಾಯಿಯೆ.

ನಮ್ಮ ಸಂಸ್ಕೃತಿ ಮೊಟ್ಟ ಮೊದಲ ಬಾರಿಗೆ ನಮ್ಮ ರಕ್ತಕ್ಕೆ ಸೇರುವುದು ತಾಯಿಯ ಮೊಲೆಹಾಲಿನಿಂದ. ತಾಯಿ ಮೊಲೆ ಹಾಲು ಕೊಡುವುದು. ಮಗು ಅದನ್ನು 'ಚೀಪಿ' ಕುಡಿಯುವುದು. ಸಂಸ್ಕೃತಿಯನ್ನು 'ಚೀಪಿದಂತೆ ಸಂಸ್ಕೃತಿಗೆ ಬಾಷೆ ಬೇಕು. ಅದೇ 'ಅವ್ವ'. ಎಂಬ ಅವ್ವ ಭಾಷೆ. ಸಂಸ್ಕೃತಿಯನ್ನು ಗುರ್ತಿಸಬೇಕು. ಅದೇ ತಾಯಿ ಗುರ್ತಿಸಿಕೊಡುವ ತಂದೆ ಅಥವಾ ಅಪ್ಪ. ಅಂದರೆ ಅಪ್ಪ, ಆ ಮಗುವಿನಿಂದ ಸಂಸ್ಕೃತಿ, ಸಂಸ್ಕೃತಿಯಿಂದ ಸಮಾಜ, ಸಮಾಜದಿಂದ ಜನಾಂಗದ ಏಳಿಗೆ ಇದೆಲ್ಲಾ ಸೇರಿದರೆ ನಮ್ಮ ಕೊರಳಿಗೆ ಚಿನ್ನದ ಹಾರ ಅದೇ ಪೊಮ್ಮಾಲೆ.

ನಮಗೆ ಜನ್ಮವಿತ್ತ ನಾಡು ನಮಗೆ ಸ್ವರ್ಗ. ಹಿರಿಯರು ಕಟ್ಟಿಟ್ಟ ಐನ್ ಮನೆ(ಅಯ್ಯ+ಮನೆ= ಐನ್‌ಮನೆ ಹಿರಿಯರ ಮನೆ) ನಮ್ಮ ಅರಮನೆ. ಅದರಲ್ಲಿ ನಿತ್ಯ ಸುರ್ಯೋದಯ, ಸೂರ್ಯೋಸ್ತಮಾನ ಕಾಲದಲ್ಲಿ ಹತ್ತಿಸುವ ಮಣ್ಣಿನ ದೀಪವೇ ನಮ್ಮ ಸಂಸ್ಕೃತಿಯ ಜ್ಯೋತಿ. ಇದನ್ನು ಮರೆತರೆ ಪಾಡು. ನಮ್ಮ ಯುವ ಜನಾಂಗ ಇಂದು ಕಲ್ಪನೆಯ ಲೋಕದಲ್ಲಿದೆ. ಕಾರಣ ಅವರನ್ನು ತಿದ್ದದ ತಾಯಂದಿರು, ಮಿನುಗುವ ಚಿನ್ನದ ಕಾಂತಿ. ಅಸಲಿ ಚಿನ್ನವನ್ನು ನಿದ್ರಿಸಿದೆ. ಪ್ರತಿಯೊಂದು ಕರ್ಮವನ್ನು ಬಿಡತಕ್ಕದಲ್ಲ. ಮಾಡತಕ್ಕದ್ದು. ನಮ್ಮ ತಾಯಿ ವಿದ್ಯಾಹೀನಳಾಗಿರಬಹುದು, ಕುರೂಪಿಯಾಗಿರಬಹುದು, ಆಕರ್ಷಹೀನಳಾಗಿರಬಹುದು. ಆದರೆ ಅವಳೇ ನಮ್ಮನ್ನು ಹೊತ್ತು, ಹೆತ್ತು, ಮುದ್ದಿಸಿ ಸಾಕಿ ಸಲಹಿದ ದಿವ್ಯ ಮಾತೆ. ಅಸಹ್ಯ ಪಡತಕ್ಕದ್ದಲ್ಲ, ಬಿಡತಕ್ಕದ್ದಲ್ಲ, ಪೋಷಿಸಿ ಪೂಜಿಸತಕ್ಕದ್ದು. ಪೂಜೆಗೆ ದೇವರಿದ್ದಷ್ಟು ಇದೆಯೋ ಲೆಕ್ಕವಿಲ್ಲ. ಲೆಕ್ಕಕ್ಕಿಲ್ಲ ಆದರೆ ಅವ್ವ, ಅಪ್ಪ ಎಂಬ ದೇವರು, ಮನೆ ದೇವರು. ಗ್ರಾಮ ದೇವರೇ ನಮಗೆ ಕಾರುಣ್ಯ ದೇವರು. ದೇವನೊಬ್ಬ ನಾಮ ಹಲವು, ಕಾರ್ಯ ಅನೇಕ. ಹಬ್ಬದಲ್ಲಿ ಶ್ರೇಷ್ಠ ಹಬ್ಬ ನಮ್ಮ ಹಬ್ಬ. ಸಂಸ್ಕೃತಿಯಲ್ಲಿ ಶ್ರೇಷ್ಠ ನಮ್ಮ ಸಂಸ್ಕೃತಿ, ಭಾಷೆಯಲ್ಲಿ ಶ್ರೇಷ್ಠ ನಮ್ಮ ತಾಯಿಭಾಷೆ. ಇದು ಮರೆತು ಬಿಡತಕ್ಕದ್ದಲ್ಲ. ಕಲಿತು ಆಚರಣೆಗೆ ತರುವಂತಾದ್ದು.

ಯೌವನದಲ್ಲಿ ಮದವಿರಬಹುದು. ಆದರೆ ಮುದಿತನ ಹತ್ತಿರ ಹತ್ತಿರ ಬರುತ್ತಿರುತ್ತದೆ ಎಂಬುದು ಮರೆಯತಕ್ಕದ್ದಲ್ಲ. Every action has reaction or it is Equal and opposite. ಅದೇ ಕರ್ಮಕ್ಕೆ ತಕ್ಕ ಫಲ.

ನಾಡಿನ ಯುವ ಜನಾಂಗ ಇಂದು ದಾರಿ ತಪ್ಪಿಲ್ಲ. ಅವರಿಗೆ ದಾರಿ ಗೊತ್ತಿಲ್ಲ. ತೋರಿಸಿ ಕೊಟ್ಟವರಿಲ್ಲ. ಇದೇ ಹಿರಿಯರು ಮಾಡಿದ ತಪ್ಪು. ತಪ್ಪು ಮಾಡಿದರೋ ಇಲ್ಲವೋ. ಹಿರಿಯರು ಹೆಚ್ಚು ಕಾಲ ಇರಲಾರರು. ಈಗಿರುವ ಕಾಲ ಯುವಕರ ಕಾಲ. ಅದೂ ಬಹಳ ಸಮಯ ನಿಮ್ಮಲ್ಲಿರಲಾರದು. ಆದ್ದರಿಂದ ಕೈಯಲ್ಲಿರುವ ಕಾಲದಲ್ಲಿ ನಮ್ಮ ನಾಡು, ನಮ್ಮ ನುಡಿ, ನಮ್ಮ ಸಂಪ್ರದಾಯ, ನಮ್ಮ ಸಮಾಜವನ್ನು ಉದ್ಧರಿಸಿ, ಬೆಳೆಸಿ, ಬೆಳೆಯಲು ಬಿಡಿ. ಇಂಗ್ಲಿಷ್ ಕಲಿಕೆ ತಪ್ಪಲ್ಲ. ನಮ್ಮ ಸಂಸ್ಕೃತಿಯನ್ನು ಕಳೆದುಕೊಳ್ಳುವುದು ಮಹಾ ಅಪರಾಧ ಹಾಗೂ ಕೀಳುತನ.

"ನಮ್ಮ ಕುಲದೇವರು ನಮ್ಮ ಕುಲವನ್ನು ತಣಿಸಿ ನಲಿಸಲಿ."

ಲೇಖನ- ಚೇಂದ್ರಿಮಾಡ ಗ. ಮುತ್ತಪ್ಪ ಕುಶಾಲನಗರ.

## 'ಕೊಡಗು ಪ್ರತ್ಯೇಕತೆಗೆ ಆಸ್ಪದವಿಲ್ಲ'

ಕೊಡಗು ಪ್ರತ್ಯೇಕ ರಾಜ್ಯದ ಹೋರಾಟಕ್ಕೆ ಬೆಂಬಲ ನೀಡುವುದಿಲ್ಲ ಎಂದು ರಾಜ್ಯ ಸಭೆ ಸದಸ್ಯೆ ಐಚೆಟ್ಟಿರ ಪ್ರೇಮಾ ಕಾರ್ಯಪ್ಪ ಇತ್ತೀಚೆಗೆ ಸ್ಪಷ್ಟಪಡಿಸಿದ್ದಾರೆ.

ಕೊಡಗು ಜಿಲ್ಲೆಯ ಅಭಿವೃದ್ಧಿಗೆ ಅವಶ್ಯವಾಗಿರುವುದನ್ನು ಅರಿತುಕೊಂಡು ಕಾರ್ಯ ನಿರ್ವಹಿಸಲಾಗುವುದು ಎಂದು ಸುದ್ದಿಗಾರರೊಂದಿಗೆ ಮಾತನಾಡುತ್ತಾ ಹೇಳಿದರು.

ಸಂಸತ್ ಸದಸ್ಯರಿಂದ ದೊರೆಯುವ ಅನುದಾನದಲ್ಲಿ ಹೆಚ್ಚಿನ ಅನುದಾನವನ್ನು ಜಿಲ್ಲೆಗೆ ನೀಡಲಾಗುವುದು. ಶಾಸಕರು ಹಾಗೂ ಸಂಸತ್ ಸದಸ್ಯರೊಂದಿಗೆ ಮಾತುಕತೆ ನಡೆಸಿ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುವುದು. ನೀರು ಮತ್ತು ರಸ್ತೆ ಕಾಮಗಾರಿಗೆ ಪ್ರಥಮ ಆದ್ಯತೆ ನೀಡಿ, ರಾಜಕೀಯರಹಿತವಾಗಿ ಕಾರ್ಯನಿರ್ವಹಿಸುವ ಭರವಸೆ ನೀಡಿದ್ದಾರೆ.

ಜಿಲ್ಲೆಯ ಅಭಿವೃದ್ಧಿಗೆ ಹೆಚ್ಚಿನ ಅನುದಾನ ಬಿಡುಗಡೆ ಮಾಡಲು ಕೇಂದ್ರ ಸರಕಾರದೊಂದಿಗೆ ಮಾತುಕತೆ ನಡೆಸಲಾಗುವುದು. ಜಿಲ್ಲೆಯಲ್ಲಿ ಕ್ರೀಡೆಗೆ ಪ್ರೋತ್ಸಾಹದ ಕೊರತೆ ಇದೆ. ಕ್ರೀಡೆಯ ಬೆಳವಣಿಗೆಗೆ ವಿಶೇಷ ಅನುದಾನ ನೀಡುವ ನಿಟ್ಟಿನಲ್ಲಿ ಪ್ರಯತ್ನಿಸಲಾಗುವುದು. ಮಹಿಳೆಯರ ಅಭಿವೃದ್ಧಿಗಾಗಿ ಕೈಗಾರಿಕೆಗಳ ಸ್ಥಾಪನೆಗೆ ಪ್ರಯತ್ನ ನಡೆಸಲಾಗುವುದು ಎಂದು ಹೇಳಿದರು.

ವೈಯಕ್ತಿಕ ನೆರವು: ಕೊಡಗಿನಿಂದ ರಾಜ್ಯ ಸಭೆಗೆ ಪ್ರಥಮವಾಗಿ ಆಯ್ಕೆಯಾಗಿರುವುದು ಸಂತಸ ಉಂಟು ಮಾಡಿದೆ ಎಂದ ಅವರು, ತಲಕಾವೇರಿ ಅಭಿವೃದ್ಧಿಗೆ ವೈಯಕ್ತಿಕ ಸಹಾಯಧನ ನೀಡುವ ಭರವಸೆ ನೀಡಿದ್ದಾರೆ.

-ಸಂಗಾತಿ.

## ಹಿಂದೂಗಳಿಗೆ ದ್ವಿತೀಯ ದರ್ಜೆ ಪ್ರಜೆ ಸ್ಥಾನ

### ವಿರೋಧ ಪಕ್ಷದ ಉಪನಾಯಕ ಡಿ. ಸದಾನಂದಗೌಡ ವಿಷಾದ

ಸಮಾಜದಲ್ಲಿ ಹಿಂದೂಗಳನ್ನು ದ್ವಿತೀಯ ದರ್ಜೆ ಪ್ರಜೆಗಳನ್ನಾಗಿ ಕಾಣಲಾಗುತ್ತಿದೆ ಎಂದು ವಿಧಾನ ಸಭೆಯಲ್ಲಿ ಪ್ರತಿಪಕ್ಷ ಉಪನಾಯಕ ಸದಾನಂದಗೌಡ ವಿಷಾದ ವ್ಯಕ್ತಪಡಿಸಿದ್ದಾರೆ.

ಭಾಗಮಂಡಲದಲ್ಲಿ ಇತ್ತೀಚೆಗೆ ನಡೆದ ಬಿಜೆಪಿ ಜನಜಾಗೃತಿ ರಥಯಾತ್ರೆಯಲ್ಲಿ ಭಾಗವಹಿಸಿ ಮಾತನಾಡುತ್ತಿದ್ದ ಗೌಡರು, ಹಿಂದೂಗಳು ಶಾಂತಿ ಕದಡುವವರಲ್ಲ. ಸರಕಾರ ಮತ ಪಡೆಯುವ ಉದ್ದೇಶದಿಂದ ಅಲ್ಪಸಂಖ್ಯಾತರನ್ನು ಸೆಳೆದುಕೊಳ್ಳಲು ಪ್ರಯತ್ನಿಸುತ್ತಿದೆ. ಸರಕಾರ ಪಾಲೂರು ದೇವಾಲಯ ದುರಸ್ತಿಗಾಗಿ ನೀಡಿದ ಭರವಸೆ ಕೇವಲ ಭರವಸೆಯಾಗಿಯೇ ಉಳಿದಿದೆ. ಸರಕಾರವನ್ನು ಜಾಗೃತಗೊಳಿಸಲು ಹೋರಾಟ ನಡೆಸುವುದು ಅನಿವಾರ್ಯವಾಗಿದೆಯೆಂದರು.

ಜಿಲ್ಲೆಯ ಮೂವರು ಸಚಿವರು ವಿಧಾನ ಮಂಡಲದಲ್ಲಿ ತಮ್ಮ ಖಾತೆ ಕುರಿತು ಮಾತನಾಡಿಲ್ಲ. ಅವರು ಮುಖ್ಯಮಂತ್ರಿಯ ಕೈಕೆಳಗೆ ಇದ್ದಾರೆ. ಜಿಲ್ಲೆಯ ಸಚಿವರೊಬ್ಬರಿಗೆ ತಮ್ಮ ಖಾತೆ ಕುರಿತು ಹೇಳಲು ಬರುವುದಿಲ್ಲ ಎಂದು ಅವರು ಸಚಿವ ಟಿ. ಜಾನ್ ಅವರನ್ನು ಪರೋಕ್ಷವಾಗಿ ತರಾಟೆಗೆ ತೆಗೆದುಕೊಂಡರು.

ಸಚಿವರು ತಮ್ಮ ಖಾತೆ ಕುರಿತು ಸರಿಯಾಗಿ ಹೇಳಿದಲ್ಲಿ ಶಾಸಕ ಸ್ಥಾನಕ್ಕೆ ರಾಜೀನಾಮೆ ನೀಡುವುದಾಗಿ ಅವರು ಸವಾಲು ಹಾಕಿದರು. ಗುಜರಾತ್‌ನಲ್ಲಿ ಹಿಂದೂಗಳ ಮೇಲೆ ಧಾಳಿ ನಡೆದ ಸಂದರ್ಭ ಕಾಂಗ್ರೆಸ್ ಪಕ್ಷ ಧ್ವನಿ ಎತ್ತಲಿಲ್ಲ. ಗುಜರಾತ್ ನ ಮುಖ್ಯಮಂತ್ರಿ ನರೇಂದ್ರ ಮೋದಿ ಅವರ ರಾಜೀನಾಮೆ ಕೇಳುವ ನೈತಿಕ ಹಕ್ಕು ಕಾಂಗ್ರೆಸ್‌ಗೆ ಇಲ್ಲ ಎಂದು ಅವರು ತಿಳಿಸಿದರು.

ರಥಯಾತ್ರೆಯ ಲಾಭವನ್ನು ದುಷ್ಕರ್ಮಿಗಳು ಪಡೆದುಕೊಳ್ಳಲಿರುವ ಹಿನ್ನಲೆಯಲ್ಲಿ ಬಿಜೆಪಿ ಜನ ಜಾಗೃತಿ ರಥಯಾತ್ರೆಯನ್ನು ಕೈ ಬಿಡಬೇಕೆಂದು ಕೇಂದ್ರ ಜವಳಿ ಸಚಿವ ವಿ. ಧನಂಜಯಕುಮಾರ್ ಮನವಿ ಮಾಡಿದ್ದಾರೆ.

-ಸಂಗಾತಿ

12ನೇ ಪುಟದಿಂದ

ಇಂತಹ ಅವಕಾಶಗಳನ್ನು ಖಂಡಿತಾ ಪಡೆಯುತ್ತಾರೆ. ಆ ಮೂಲಕ ಕೊಡಗಿನ ಹಿರಿಯ ಸೈನ್ಯಾಧಿಕಾರಿಗಳ ಘನತೆಯನ್ನು ಉಳಿಸಿ ಮತ್ತೊಮ್ಮೆ ಕೊಡಗಿನ ಹೆಸರು ಭಾರತದ, ವಿಶ್ವದ ಭೂಪಟದಲ್ಲಿ ಚಿರಸ್ಥಾಯಿಯಾಗಿ ಉಳಿಯಲು ಪ್ರಯತ್ನ ಸಾಗಲಿ ಎನ್ನುವ ಮಂದ್ರೀರ ಜಯಪ್ರಕಾಶ್ ತನ್ನ ಸಾಧನೆ ಹೆಮ್ಮೆ ತಂದಿದೆ ಎನ್ನುತ್ತಾರೆ.

-ಐ. ಸಿ. ಲವಕುಮಾರ್, ಮರಗೋಡು.

# ಲೆಬನಾನ್‌ನಲ್ಲಿ ವಿಶ್ವ ಶಾಂತಿ ಪಾಲನಾ ಪಡೆ

## ಪಡೆಯಲ್ಲಿ ಕೊಡಗಿನ ಯುವರ ಮಂದ್ರೀರ ಜಯಪ್ರಕಾಶ್

ವಿಶ್ವ ಯಾವುದೇ ರಾಷ್ಟ್ರದಲ್ಲಿ ಆಂತರಿಕ ಕಲಹ, ಯುದ್ಧ ಸಂಭವಿಸಿ, ಅಶಾಂತಿಗೆ ಕಾರಣವಾದರೆ, ಆ ರಾಷ್ಟ್ರದಲ್ಲಿ ಶಾಂತಿಯನ್ನು ಮರು ಸ್ಥಾಪಿಸುವಲ್ಲಿ ವಿಶ್ವ ಸಂಸ್ಥೆಯಿಂದ ರಚಿತಗೊಂಡಿರುವ ವಿಶ್ವ ಶಾಂತಿ ಪಾಲನಾ ಪಡೆಯ ಕಾರ್ಯ ವೈಖರಿ ಅಮೋಘವಾದುದು. ಪ್ರಸ್ತುತ ಲೆಬನಾನ್‌ನಲ್ಲಿ ಉದ್ಭವಿಸಿರುವ ಸಮಸ್ಯೆಗಳ ಶಮನಕ್ಕಾಗಿ ಶಾಂತಿ ಪಾಲನಾ ಪಡೆಯನ್ನು ಅಲ್ಲಿ ನಿಯುಕ್ತಿಗೊಳಿಸಲಾಗಿದೆ.

ಈ ಪಡೆಗೆ ಮರಗೋಡು ಗ್ರಾಮದ ಮಂದ್ರೀರ



ಜಯಪ್ರಕಾಶ್‌ರವರು ಆಯ್ಕೆಯಾಗಿದ್ದು. ಲೆಬನಾನ್ ರಾಷ್ಟ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ.

ಭಾರತದ 9 ನೇ ಗೂರ್ಖಾ ಬೆಟಾಲಿಯನ್ ತಂಡದ ಸಿಗ್ನಲ್ಸ್ ವಿಭಾಗದಿಂದ ಶಾಂತಿ ಪಾಲನಾ ಪಡೆಗೆ 9 ಜನರನ್ನು ಆರಿಸಲಾಗಿದ್ದು, ಇದರಲ್ಲಿ ಮಂದ್ರೀರ ಜಯಪ್ರಕಾಶ್, ಒಬ್ಬರಾಗಿದ್ದು, ಭಾರತದ ಶಾಂತಿ ಪಾಲನಾ ಪಡೆಯೊಂದಿಗೆ ಫಿನ್ ಲ್ಯಾಂಡ್, ಘಾನಾ, ಐರೀಷ್, ಫ್ರಾನ್ಸ್, ಫಿಜಿ, ನೇಪಾಳ ಉಕ್ರೇನ್ ಮತ್ತು ಇಟಲಿ ದೇಶಗಳ ಸೈನಿಕರಿದ್ದ ಈ ತಂಡವನ್ನು ಲೆಬನಾನ್ ರಾಷ್ಟ್ರಕ್ಕೆ ಶಾಂತಿ ಪಾಲನಾ ಕಾರ್ಯಕ್ಕೆ ನಿಯೋಜಿಸಿತ್ತು. ಭಾರತದ ಶಾಂತಿ ಪಾಲನಾ ಪಡೆಯು ಕಳೆದ 20 ವರ್ಷಗಳಿಂದ ವಿಶ್ವದ ಬೇರೆ ಬೇರೆ ಸ್ಥಳಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಲೆಬನಾನ್ ರಾಷ್ಟ್ರ ಮತ್ತು ಇಸ್ರೇಲ್ ರಾಷ್ಟ್ರಗಳ ನಡುವೆ ರಾಜಕೀಯ ಕಿತ್ತಾಟದಿಂದ ಯುದ್ಧ ಸಂಭವಿಸುತ್ತಿದ್ದು, ಈ ರಾಷ್ಟ್ರಗಳಲ್ಲಿ ದಿನ ಬೆಳಗಾದರೆ ಸಾಕು, ರಾಕೆಟ್‌ಗಳು, ಕ್ಷಿಪಣಿಗಳನ್ನು ಉಡಾಯಿಸುತ್ತಿರುವ ದೃಶ್ಯ ಸಾಮಾನ್ಯ. ಆರ್ಥಿಕವಾಗಿ ಲೆಬನಾನ್ ರಾಷ್ಟ್ರ ಬಲಿಷ್ಟವಾಗಿದೆ. ಮತ್ತು ಲೆಬಾನ್ ಎನ್ನುವ ಹಣ ಇಲ್ಲಿ ಚಾಲ್ತಿಯಲ್ಲಿದ್ದು 1 ಲೆಬನ್ ಭಾರತದ47.6 ರೂಪಾಯಿಗಳಿಗೆ ಸಮವಾಗುತ್ತದೆ. ಹಾಗೂ ಈ ದೇಶವನ್ನು ಕೇವಲ6 ಗಂಟೆಗಳಲ್ಲಿ ಸುತ್ತಿ ಬರಬಹುದು.. ಹಾಗೂ ಅತಿ ಚಿಕ್ಕ ರಾಷ್ಟ್ರವಾದರೂ ಸ್ವಚ್ಛವಾಗಿ, ಜನಜೀವನ ಮಟ್ಟ ಉತ್ತಮ ವಾಗಿ ರೂಪುಗೊಂಡಿದೆ. ಶೇಕಡಾ 70 ಮುಸ್ಲಿಮರು ಶೇಕಡಾ 30 ರಷ್ಟು ಕ್ರಿಶ್ಚಿಯನ್ ಜನಾಂಗವನ್ನು ಈ ದೇಶ ಹೊಂದಿದ್ದು, ಪಕ್ಕದ ಇಸ್ರೇಲ್ ರಾಷ್ಟ್ರದ ಧಾಳಿಯನ್ನು ತಪ್ಪಿಸುವ ಸಲುವಾಗಿ ವಿಶ್ವ ಶಾಂತಿ ಪಾಲನಾ ಪಡೆಯನ್ನು ಇಲ್ಲಿ ನಿಯೋಜಿಸಲಾಗಿದೆ. ಇತ್ತೀಚೆಗೆ ಜಯ ಪ್ರಕಾಶ್ ಅವರು ತವರೂರಿಗೆ ಮರಳಿದ್ದ ಸಂದರ್ಭ ಮಾತನಾಡಿಸಿದಾಗ ಕರ್ತವ್ಯದ ವೇಳೆಯು ಕಷ್ಟಕರವಾಗಿದ್ದರೂ ಸೇನೆಗೆ ಸೇರಿದ ಮೇಲೆ ಇದು ಸಾಮಾನ್ಯ ಎನ್ನುವ ಇವರು ಇಂತಹ ಅವಕಾಶಗಳು ಸಿಗುವುದು ಕಷ್ಟ. ತಮ್ಮ ಸೇವಾವಧಿಯಲ್ಲಿ ಸಿಕ್ಕಿರುವ ಈ ಅವಕಾಶವನ್ನು ಸದುಪಯೋಗ ಪಡಿಸಿಕೊಂಡಿದ್ದೇನೆ. ಕೊಡಗಿನ ಉತ್ಸಾಹಿಗಳು, ಅದರಲ್ಲೂ ಈಗಾಗಲೇ ಸೇನೆಗೆ ಸೇರಿದ ಯುವಕರು

11ನೇ ಪುಟಕ್ಕೆ

## " ಕೊಡಗು ಮಲ್ಲಿಗೆ"

ಒಂದಿರುಳು ಕನಸಿನಲ್ಲಿ " ಸಂಗಾತಿ" ಯ ಕೇಳಿದೆನು
ಚೆಂದ ನಿನಗಾವುದೆಂದು
ನಮ್ಮೂರು ಮದೆನಾಡೂ ನಿಮ್ಮೂರು ಅವಂದೂರೂ
ಚೆಂದ ನಿನಗಾವುದೆಂದು
ಮದೆನಾಡು ಚೆಂದವೋ.. ಅವಂದೂರು ಚೆಂದವೋ
ಎಂದೆನ್ನ ಕೇಳಲೇಕೆ?
ಅವಂದೂರು ಮನೆಯಲ್ಲಿ ಮದೆನಾಡು ನೆನೆಸಿದೆನು.
ವಿಸ್ತರಿಸಿ ಹೇಳಬೇಕೆ?
ಮದೆನಾಡು ಚಂದವೋ ಅವಂದೂರು ಚೆಂದವೋ
ಎಂದೆನ್ನ ಕೇಳಲೇಕೆ? ಎನ್ನರಸ
ಸುಮ್ಮನಿರಿ ಎಂದಳಾಕೆ
(ಒಂದಿರುಳು)

ಮದೆನಾಡು ದಾರಿಯಲಿ ಏಲಕ್ಕಿ ಕಾಫಿಗಿಡ ತಲೆದೂಗಿ
ಬಾಳೆಗಳು ತೋಳ ಬೀಸಿ
ಮಲ್ಲಿಗೆಯ ಮೊಗ್ಗುಗಳು ಮುಳ್ಳು ಬೇಲಿಯವರಿಸಿ
ಬಳುಕುತಿರೆ ಕಂಪ ಸೂಸಿ
ನಗು ನಗುತ ಅವಂದೂರು ಹೆಣ್ಣುಗಳು ಬರುತಿರಲು
ಮದೆನಾಡು ಹಬ್ಬಕ್ಕಾಗಿ.
ಅವಂದೂರುಗಿಂತಲೂ ಮದೆನಾಡು ಸುಖವೆಂದು
ನಿಲ್ಲಿಸಿತು ಪ್ರೇಮ ಕೂಗಿ
ಮದೆನಾಡು ಚಂದವೋ ಅವಂದೂರು ಚಂದವೋ
ಎಂದೆನ್ನ ಕೇಳಲೇಕೆ? ಎನ್ನರಸ
ಸುಮ್ಮನಿರಿ ಎಂದಳಾಕೆ
(ಒಂದಿರುಳು)

ಮದೆನಾಡು ಬಸ್ಸಿನಲ್ಲಿ ಅವಂದೂರು ಬಿಟ್ಟಾಗ
ಓಡಿದುದು ದಾರಿ ಬೇಗ
ಪುಟ್ಟ ಕಂದನ ಅಳುವು ತೊಟ್ಟಿಲನು ತುಂಬಿತ್ತು
ಮದೆನಾಡು ಸೇರಿದಾಗ
ಗದ್ದೆ ಬೈಲಿಗೆ ಬಂದು ನೀವು ನಮ್ಮನ್ನು ಕಂಡು
ಕುಶಲವನು ಕೇಳಿದಾಗ
ತುಟಿಯಲ್ಲೇನೋ ನಿಂದು ಕಣ್ಣಲ್ಲೇನೋ ಬಂದು
ಕೆನ್ನೆ ಕೆಂಪಾದುದಾಗ
ಮದೆನಾಡು ಚಂದವೋ ಅವಂದೂರು ಚಂದವೋ
ಎಂದನ್ನ ಕೇಳಲೇಕೆ, ಎನ್ನರಸ
ಸುಮ್ಮನಿರಿ ಎಂದಳಾಕೆ
(ಒಂದಿರುಳು)

ರಚನೆ: ಪಟ್ಟಡ ಶ್ರೀಧರ ಮಾಚಯ್ಯ, ಬೆಳವಾಡಿ ಮೈಸೂರು,
ಮೂಲ ರಚನೆ: ಕೆ. ಯಸ್ ನರಸಿಂಹಸ್ವಾಮಿ

## ನೈಜ ಘಟನೆ: ಅಣ್ಣನ ಪ್ರೀತಿ

ಕೆಲವು ವರ್ಷಗಳ ಹಿಂದೆ ನಡ್ದ ಘಟನೆ. ಅಸ್ಸಾಂನ ಗುಡ್ಡಗಾಡ್ ಪ್ರದೇಶದ ಒಂದ್ ಆಸ್ಪತ್ರೆಲಿ ನನ್ನ ಫ್ರೆಂಡ್ ಡಾ|| ಪ್ರಶಾಂತ್‌ಗೆ ಪೋಸ್ಟಿಂಗ್ ಆಗಿತ್ತ್. ಡಾ|| ಪ್ರಶಾಂತ್ ಒಂದು ವರ್ಷದ ಸಣ್ಣ ಗೂಡೆಗೆ ಟ್ರೀಟ್‌ಮೆಂಟ್ ಕೊಡ್ತಾ ಇತ್ತ್ ಗಡ. ಆ ಗೂಡೆಗೆ ಅಲ್ಲಿನ ಬುಡ್‌ಕಟ್ಟ್ ಜನಾಂಗದವಕೆ ಮಾತ್ರ ಬರ್‍ತಾ ಇದ್ದ ಎಂತೋ ವಿಚಿತ್ರ ಖಾಯಿಲೆ. ಬಹಳ ಅಪರೂಪದ ಮತ್ತ್ ಅಷ್ಟೆ ಅಪಾಯದ ಆ ಖಾಯಿಲೆಂದಾಗಿ ಸುಮಾರ್ ಜನ ಸತ್ತಿದ್ದೊ ಗಡ. ಅವ್ವು ಬದುಕೊಕು ತೇಳಿ ಒಂದೇ ಒಂದ್ ದಾರಿ ಇತ್ತ್. ಆ ಗೂಡೆದ್ ಅಣ್ಣಂಗೆ ಅದೇ ಖಾಯಿಲೆ ಬಂದ್ ವಾಸಿಯಾಗಿತ್ತ್. ಅಂವನ ಮೈಲಿ ಆ ಖಾಯಿಲೆನ ತಡಿಯುವಂತ ಜೀವಾಣುಗ ಉತ್ಪತ್ತಿಯಾಗಿತ್ತ್. ಆ ಹೈದ ಆ ಗೂಡೆಗೆ ರಕ್ತ ಕೊಟ್ಟರೆ ಗೂಡೆ ಚೇತರಿಸಿಕಣುವ ಸಾಧ್ಯತೆ ಇತ್ತ್.

ಡಾಕ್ಟರ್‌ಗ ಎಲ್ಲ ಸೇರಿ ಆ ವಿಷಯನ ಗೂಡೆದ್ ಅಪ್ಪ ಅವ್ವಂಗೆ ತಿಳಿಸಿ ಆ ಸಣ್ಣ ಹೈದನ ರಕ್ತನ ಗೂಡೆಗೆ ವರ್ಗಾವಣೆ ಮಾಡಿಕೆ ಸಿದ್ಧತೆಗಳ್ಳ ಮಾಡಿಕಂಡೊ. ಆ ಸಣ್ಣ ಹೈದಂಗೆ ಪಾಪ ಹೆದ್ರಿಕೆ. ಮುಖವಾಡ ಹಾಕಿಕಂಡ ಡಾಕ್ಟರ್‌ಗ ಸೂಜಿ, ಮದ್ದ್ ಇದ್ದೆಲ್ಲಾ ನೋಡಿ ಹೈದ ಪೆಚ್ಚಾಗಿ ಹೋಗಿತ್ತ್. ಡಾಕ್ಟರ್‌ಗ ಅವಂನ ಕುರ್ಚಿ ಮೇಲೆ ಕೂರ್‍ಸಿ ಪರಿಸ್ಥಿತಿನ ಸೂಕ್ಷ್ಮಲಿ ಅವಂಗೆ ವಿವರಿಸಿ 'ನಿನ್ನ ತಂಗೆದ್ ಪ್ರಾಣ ಉಳಿಸಿಕೆ ನೀನ್ ನಿನ್ನ ರಕ್ತ ಕೊಟ್ಟೆಯಾ?" ತೇಳಿ ಕೇಳ್ಲೊ ಹೈದ ಸ್ವಲ್ಪ ಹೊತ್ತು ಮೌನವಾಗಿದ್ದ್ ಎಂತ ಹೇಳಿಕೊ ಹಿಂತರಿಯುವಂಗೆ ಕಂಡತ್. ಕೊನೆಗೆ ಅಂವ ಒಂದ್ ದೀರ್ಘವಾದ ಉಸಿರ್ ಎಳ್‌ಕಂಡ್ " ಸರಿ, ತಂಗೆದ್ ಪ್ರಾಣ ಉಳಿಸಿಕೆ ನನ್ನ ರಕ್ತ ತಕಣಿ" ತೇಳಿ ಒಪ್ಪಿಕಂಡತ್

ಸರಿ ಡಾಕ್ಟರ್‌ಗ ಅಂವನ ಹಾಸಿಗೆಲಿ ಮಲಗಿಸಿ ರಕ್ತ ವರ್ಗಾವಣೆ ಮಾಡಿಕೆ ಶುರುಮಾಡ್‌ದೊ ಅಂವನ ಕೈಗೆ ಸೂಜಿ ಚುಚ್ಚಿ, ಅಂಗೈಗೆ ಒಂದು ಸ್ಪಂಜ್ ಅದ್ದ ಮತ್ತೆ ಮತ್ತೆ ಅದುಮಿಕೆ ಹೇಳ್ಲೊ. ಹತ್ತರದ ಬೆಡ್‌ಲಿ ಮಲಗಿದ್ದ ತಂಗೆನ ನೋಡಿ ಹೈದಂಗೆ ಕಣ್ಣ್ ಮಂಜಾತ್. ಹೈದನ ರಕ್ತ ಬಾಟಲೀಲಿ ಶೇಕರಣೆಯಾಕೆ ಶುರು ಆತ್. ಹೈದ ತಲೆ ಎತ್ತಿ ಡಾಕ್ಟರನ ನೋಡಿ ಸಣ್ಣ ದನಿಲಿ ಕೇಳ್ತ್" ರಕ್ತ ಕೊಟ್ಟ ಕೂಡಲೇ ನಾನ್ ಸತ್ತ್ ಹೋದನೆಯಾ?"

ಪಾಪದ ಹೈದ ಡಾಕ್ಟರ್‌ಗೆ ಹೇಳ್ದನ್ನ ಸರಿಯಾಗಿ ಅರ್ಥಮಾಡಿಕಂಡಿತ್ಲೆ. ತಂಗೆನ ಉಳ್ಸಿಕೆ ಅಂವನ ಮೈಲಿದ್ದ ಎಲ್ಲಾ ರಕ್ತನೂ ಖಾಲಿ ಮಾಡುವೆತೇಳಿ ಗ್ಯಾನ ಮಾಡಿಕಂಡಿತ್ತ್, ತಂಗೆನ ಉಳಿಸಿ ತಾನ್ ಸತ್ತ್ ಹೋಕೆ ರೆಡಿಯಾಗಿ ರಕ್ತ ಕೊಡಿಕೆ ಒಪ್ಪಿಕಂಡಿತ್ತ್.. ಅನರಕ್ಷರಸ್ಥ ಆದರೇನ್, ಗುಡ್ಡಗಾಡ್‌ನ ಬುದ್ಧಿ ಇಲ್ಲದ ಹೈದ ಆದರೇನ್ ಸಮಯಕ್ಕೆ ಸರಿಯಾಗಿ ಸಹಾಯ ಮಾಡುವ ಮನೋಭಾವ ಮುಖ್ಯ ಅಲ್ಲಾ?!

(ಇದ್ ನನ್ನ ಡಾಕ್ಟರ್ ಫ್ರೆಂಡ್ ಹೇಳ್ದ ನಿಜವಾದ ಘಟನೆ)

-ಎಡಿಕೇರಿ ಸುದರ್ಶನ್, ಬೆಂಗಳೂರು

ಬಡತನವು ಅಭಿಶಾಪವಲ್ಲ, ಅದೊಂದು ಅನಾನುಕೂಲ

# ನಿರಭಿಮಾನಿ ಕನ್ನಡಿಗರಿಂದ ಭಾಷೆಗೆ ಕುತ್ತು : ಶಿವಳ್ಳಿ ಕೆಂಪೇಗೌಡ

- ನಾಡು -ನುಡಿಗೆ ಸಾಹಿತಿ ಕಳಕಳಿ -

* ಇಂಗ್ಲೀಷ್ ಬೇಕು-ಇಂಗ್ಲೀಷ್ ಮಾಧ್ಯಮ ಬೇಡ
* ಪರಿಷತ್ ಭವನದಲ್ಲಿ ಕೃತಿ ರಕ್ಷಣೆಯಾಗಲಿ
* ಉದಯೋನ್ಮುಖ ಲೇಖಕರಿಗೆ ಶಿಕ್ಷಣ ಬೇಕು
* ಸೃಜನಶೀಲತೆ ಎಂಬುದು ಅಂತರ್ಜಲ
* ಬದುಕನ್ನು ಬಿಟ್ಟು ಬರವಣಿಗೆಯಿಲ್ಲ

ನಾಡಿನ ಶ್ರೇಷ್ಠ ಕವಿ ಡಾ. ಜಿ. ಎಸ್. ಶಿವರುದ್ರಪ್ಪ ಅವರು ಸೂಚಿಸಿರುವ' ಇಂಗ್ಲಿಷ್ ಬೇಕು- ಇಂಗ್ಲೀಷ್ ಮಾಧ್ಯಮ ಬೇಡ' ಎಂಬ ಸೂತ್ರ ಜಾರಿಗೊಳಿಸುವ ಮೂಲಕ ಕನ್ನಡಕ್ಕೆ ಬಂದೊದಗಿರುವ ವಿಪತ್ತು ಪರಿಹರಿಸಬೇಕೆಂದು ಸಾಹಿತಿ ಶಿವಳ್ಳಿ ಕೆಂಪೇಗೌಡ ಸರಕಾರವನ್ನು ಇತ್ತೀಚೆಗೆ ಒತ್ತಾಯಿಸಿದ್ದಾರೆ.

ಬಡಾವಣೆಯ ರಂಗಮಂಟಪದಲ್ಲಿ ಮಂಡ್ಯದ ಸ್ವರ್ಣಸಂದ ನಡೆದ ತಾಲೂಕು ಮಟ್ಟದ5 ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪೀಠದಿಂದ ಮಾತನಾಡಿದ ಅವರು, ಕನ್ನಡಿಗರು ನಿರಭಿಮಾನಿಗಳಾಗಿರುವುದರಿಂದ ಕನ್ನಡಕ್ಕೆ ಕುತ್ತು ಎದುರಾಗಿದೆ ಎಂದು ಆತಂಕ ವ್ಯಕ್ತಪಡಿಸಿದರು.

ಇಂಗ್ಲೀಷ್ ಮಾಧ್ಯಮಕ್ಕೆ ಅನುಮತಿ ನೀಡುವುದರಿಂದ ಕನ್ನಡದ ಅಳಿವು ಸಾಧ್ಯವಾಗದು. ಈ ನಿಟ್ಟಿನಲ್ಲಿ ಗಂಭೀರ ಚಿಂತನೆ ನಡೆಸಿ, ಜಿ. ಎಸ್. ಎಸ್. ಅವರ ಸೂತ್ರ ಜಾರಿ ಮಾಡಿ ಕೀರ್ತಿಗೆ ಪಾತ್ರರಾಗುವಂತೆ ಮುಖ್ಯಮಂತ್ರಿ ಎಸ್. ಎಂ. ಕೃಷ್ಣ ಅವರಿಗೆ ಸಲಹೆ ನೀಡಿದರು.

ಜಿಲ್ಲೆಯ ಹಿರಿಯ ಮತ್ತು ಕಿರಿಯ ಸಾಹಿತಿಗಳ ಪ್ರಕಟಿತ ಕೃತಿಗಳ ತಲಾ ಎರಡು ಪ್ರತಿಗಳನ್ನು ಸಾಹಿತ್ಯ ಪರಿಷತ್ ಭವನದಲ್ಲಿ ಸಂರಕ್ಷಿಸಬೇಕು. ಸೂಕ್ತ ಮಾರ್ಗದರ್ಶನವಿಲ್ಲದೆ ತೊಳಲಾಡುತ್ತಿರುವ ಯುವ ಲೇಖಕರಿಗೆ ಮೂರು ವರ್ಷಗಳಿಗೊಮ್ಮೆ 'ಉದಯೋನ್ಮುಖ ಲೇಖಕರ ಶಿಕ್ಷಣ ಶಿಬಿರ ಏರ್ಪಡಿಸಬೇಕೆಂದು ತಿಳಿಸಿದರು.

ಕವಿಗೋಷ್ಠಿಗಷ್ಟೇ ಸೀಮಿತವಾಗದಿರಲಿ: ಪ್ರತಿವರ್ಷ ಉದಯೋನ್ಮುಖ ಲೇಖಕರಿಂದ ಹಸ್ತ ಪ್ರತಿಗಳನ್ನು ಆಹ್ವಾನಿಸಿ, ತಜ್ಞರು ಆಯ್ಕೆ ಮಾಡಿದ ಒಂದು ಕೃತಿಯನ್ನು ಸಾಹಿತ್ಯ ಪರಿಷತ್ ನಿಂದ ಪ್ರಕಟಿಸಬೇಕು. ಯಾವುದೇ ಸಾಹಿತ್ಯ ಸಮ್ಮೇಳನ ಜಿಲ್ಲಾ ವ್ಯಾಪ್ತಿಯನ್ನು ಪಡೆಯುವಂತೆ ಗೋಷ್ಠಿಗಳನ್ನು ರೂಪಿಸಿ, ಕೃಷಿಗೆ ಸಂಬಂಧಿಸಿದಂತೆ ಒತ್ತು ನೀಡಬೇಕು. ಯುವ ಬರಹಗಾರರನ್ನು ಕವಿಗೋಷ್ಠಿಗಳಿಗಷ್ಟೇ ಸೀಮಿತಗೊಳಿಸದೆ ಪ್ರಬಂಧ ಮಂಡನೆಗೆ ಅವಕಾಶ ಕಲ್ಪಿಸಬೇಕೆಂದು ಹೇಳಿದರು.

ಪ್ರೌಢ ಶಾಲೆವರೆಗಷ್ಟೇ ವ್ಯಾಸಂಗ ಮಾಡಿರುವ ತಮಗೆ ಸಾಹಿತ್ಯದಲ್ಲಿ ಆಸಕ್ತಿ ಮೂಡಿದ್ದು ಅನಿರೀಕ್ಷಿತ. ತಮ್ಮ ಸಾಹಿತ್ಯಕ್ಕೆ ಬಡತನದ ಬೇಗುದಿಯೇ ಪ್ರೇರಣೆಯಾಗಿದೆ. ಬಡತನ ಪರಸ್ಪರ ಪ್ರೀತಿ, ವಿಶ್ವಾಸ ಬೆಳೆಸುತ್ತದೆ. ಮಾನವೀಯತೆಯನ್ನು ಕಲಿಸುವ ಶಕ್ತಿ ಹೊಂದಿದೆ ಎಂದು ಅನುಭವವನ್ನು ವಿವರಿಸಿದರು.

ಡಾ. ಬೆಸಗರಹಳ್ಳಿ ರಾಮಣ್ಣ ಅವರ 'ಸುಗ್ಗಿ'ಯು ತಾವು ಓದಿದ ಮೊದಲ ಕಥೆ. ಜಿಲ್ಲೆಯ ಹಳ್ಳಿಗಾಡಿನ ಭಾಷೆಯ ಸೊಗಡು ಹೊಂದಿರುವ ಈ ಕಥೆ ತಮ್ಮಲ್ಲಿ ಆನಂದದ ಅಲೆಗಳನ್ನೆಬ್ಬಿಸಿತು. ಸಾಹಿತ್ಯಾಸಕ್ತಿ ಬೆಳೆದಂತೆ ಕುವೆಂಪು, ಬೇಂದ್ರೆ, ಶಿವರಾಮಕಾರಂತ, ಅನಕೃ, ತರಾಸು, ಚದುರಂಗ, ಅನಂತಮೂರ್ತಿ, ಲಂಕೇಶ್, ಪೂರ್ಣಚಂದ್ರ, ತೇಜಸ್ವಿ, ಯಶವಂತ ಚಿತ್ತಾಲ, ಕೆ. ಸದಾಶಿವ ಪ್ರೊ. ಸುಧಾಕರ ಡಾ. ಜೀಶಂಪ, ರಾಘವೇಂದ್ರ ಖಾಸನೀಸ, ಶ್ರೀಕೃಷ್ಣ ಆಲನಹಳ್ಳಿ, ದೇವನೂರ ಮಹಾದೇವ ಮುಂತಾದ ಶ್ರೇಷ್ಠ ಲೇಖಕರ ಸಾಹಿತ್ಯ ಕೃತಿಗಳು ತಮ್ಮ ಕಣ್ತೆರೆಸಿದವು ಎಂದು ನುಡಿದರು.

ಸೃಜನಶೀಲತೆ ಎಂಬುದು ಅಂತರ್ಜಲ.

ಸಾಹಿತ್ಯದ ಶಕ್ತಿ ಅರ್ಥ ಮಾಡಿಕೊಂಡಿರುವವರು ಸಾಹಿತ್ಯ ಬೇಕೆ? ಬೇಡವೇ? ಎಂದು ಚರ್ಚಿಸುವುದಿಲ್ಲ, ಸೃಜನಶೀಲತ ಎಂಬುದು ಅಂತರ್ಜಲ ಎಂದು ತಿಳಿದುಕೊಂಡು ಸೃಷ್ಟಿ ಕ್ರಿಯೆಯಲ್ಲಿ ತೊಡಗಿರುತ್ತಾರೆ. ಕಾವ್ಯ ಕಲೆ ಎಷ್ಟೇ ತಿಣುಕಾಡಿದರೂ ಎಲ್ಲರಿಗೂ ಸಿದ್ಧಿಸುವುದಿಲ್ಲ ಎಂದು ಅವರು ಹೇಳಿದರು.

ಲೇಖಕನಿಗೆ ಬರವಣಿಗೆಯೇ ಸಂಜೀವಿನಿ. ಬರವಣಿಗೆಗಾಗಿಯೇ ಬದುಕನ್ನು ಮೀಸಲಾಗಿಟ್ಟ ಅದೆಷ್ಟೋ ಮಂದಿ ಮಹಾನ್ ಸಾಹಿತಿಗಳ ಉದಾಹರಣೆಗಳು ನಮ್ಮ ಕಣ್ಮುಂದಿವೆ. ಬೀದಿಗೆ ಬರಲು ಬಟ್ಟೆಯಿಲ್ಲದೆ ಪರಿತಪಿಸುವ ಬರಹಗಾರರೂ ಇದ್ದಾರೆ. ಬರವಣಿಗೆ ಬೊಗಸೆಯಲ್ಲಿ ನೀರು ಕುಡಿದಂತೆ. ನಾವು ಕುಡಿಯುವುದಕ್ಕಿಂತ ಸೋರಿ ಹೋಗುವುದೇ ಹೆಚ್ಚು. ಈ ಸೋರುವಿಕೆಯನ್ನು ತಡೆಗಟ್ಟುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರ ದೊರೆತಾಗ ಮಾತ್ರ ನಾವು ಹೆಚ್ಚಿನದನ್ನು ಸಾಧಿಸಬಹುದೆಂದು ಅಭಿಪ್ರಾಯ ಪಟ್ಟರು.

ಸಾಹಿತ್ಯಕ್ಕೆ ಬದುಕೇ ತಾಯಿಬೇರು:

ಎಲ್ಲಾ ಸಾಹಿತ್ಯ ಕಲೆಗಳಿಗೆ ಬದುಕೇ ತಾಯಿಬೇರು. ಬದುಕನ್ನು ಬಿಟ್ಟು ಬರವಣಿಗೆಯಿಲ್ಲ. ಸದ್ಗ್ರಂಥ ಮಹಿಮೆಯಿಂದ ಜನ ಜೀವನ ಉತ್ತಮಗೊಳ್ಳುವಂತೆಯೇ ಜನ ಜೀವನದ ಮಹಿಮೆಯಿಂದ ಸದ್ಗ್ರಂಥಗಳು ಹುಟ್ಟುತ್ತವೆ. ನಿಜವಾದ ಬರಹಗಾರ ತಿರಸ್ಕೃತರು ಮತ್ತು ಘಾಸಿಗೊಂಡವರ ಪರ ಇರುತ್ತಾನೆ. ಅವನ ಬದುಕು ಸ್ವರ್ಗವಾಗಿರದೆ, ನರಕವಾಗಿರುತ್ತದೆಂದರು.

ಸಾಹಿತ್ಯ ಕೃತಿ ತಮ್ಮ ತನ್ನ ಪರಿಣಾಮವನ್ನು ಸುಪ್ತ ಪ್ರಜ್ಞೆಯಲ್ಲಿ ನಿರ್ವಹಿಸುತ್ತಿರುತ್ತದೆ. ಸಮಾಜದ ಮೇಲೆ ಸಾಹಿತ್ಯ ಪ್ರಭಾವ ಬೀರುತ್ತಿದೆ. ಸಾಹಿತ್ಯದಿಂದ ಸಾಮಾಜಿಕ ಬದಲಾವಣೆ ಖಂಡಿತ ಸಾಧ್ಯವಿದೆ. ದೇವನೂರ ಮಹಾದೇವ ಅವರ 'ದ್ಯಾವನೂರು' ಕಥಾ ಸಂಕಲನ ಮತ್ತು ಸಿದ್ಧಲಿಂಗಯ್ಯ ಅವರ 'ಹೊಲೆಮಾದಿಗರ ಹಾಡು' ದಲಿತ ಸಂಘರ್ಷ ಸಮಿತಿ ಅಸ್ತಿತ್ವಕ್ಕೆ ಪ್ರೇರಣೆಯಾದವು. ಕುವೆಂಪು ಅವರ 'ಧನ್ವಂತರಿಯ ಚಿಕಿತ್ಸೆ' ಕತೆ ರೈತ ಸಂಘ ಜನ್ಮ ತಳೆಯಲು ಕಾರಣವಾಯಿತು ಎಂದು ಅವರು

ವಿಶ್ಲೇಷಿಸಿದರು. ಶ್ರೇಷ್ಠ ಸಾಹಿತ್ಯ ಕೃತಿಗಳ ಪಾತ್ರಗಳು ನಮ್ಮ ಮನದಾಳಕ್ಕಿಳಿಯುತ್ತವೆ. ಮೆಲುದನಿಯಲ್ಲಿ ನಮ್ಮೊಡನೆ ಮಾತನಾಡುತ್ತವೆ. ಮಾನವೀಯ ಮೌಲ್ಯಗಳ ದರ್ಶನ ಮಾಡಿಸಿ, ಬೆಳಕಿನೆಡೆಗೆ ಹೆಜ್ಜೆ ಹಾಕುವಂತೆ ಪ್ರೇರೇಪಿಸುತ್ತವೆ. ಸಾಹಿತ್ಯ ಸಮ್ಮೇಳನಗಳಲ್ಲಿ ರಾಜಕಾರಣಿಗಳ ಪಾತ್ರದ ಬಗ್ಗೆ ಆಗಾಗ್ಗೆ ಚರ್ಚೆಗಳು ನಡೆಯುತ್ತಿವೆ ಎಂದರು.

'ಕವಿಗಳು ಜಗತ್ತಿನ ಅನಧಿಕೃತ ಶಾಸಕರು ಎಂದು ಮಹಾಕವಿ ಷೆಲ್ಲಿ ತಿಳಿಸಿರುವರು. ಕವಿ ಸಾಹಿತಿಗಳ ಮನಸ್ಸಿನಲ್ಲಿ ಮೂಡುವ ಆಲೋಚನೆ, ಚಿಂತನೆಗಳನ್ನು ಬಳಸಿಕೊಂಡು ಆದರ್ಶ ಸಮಾಜದ ಕನಸನ್ನು ನನಸು ಮಾಡಲು ರಾಜಕಾರಣಿಗಳು ಸಾಹಿತ್ಯ ಸಮ್ಮೇಳನಗಳಲ್ಲಿ ಪಾಲ್ಗೊಳ್ಳಬೇಕೆಂದು ಅವರು ಅಭಿಪ್ರಾಯಪಟ್ಟರು.

ಕನ್ನಡ ಪದದ ಅರ್ಥ ಆಗಸದಷ್ಟು ವಿಶಾಲ. ಸಮುದ್ರದಷ್ಟು ಆಳ. ಕನ್ನಡ ಎಂಬ ಮೂರಕ್ಷರದ ತ್ರಿಮೂರ್ತಿಗಳಿದ್ದಾರೆ. ಕ. ಕಮಲಾಕ್ಷ ಸುತ ಬ್ರಹ್ಮನನ್ನು ನ. ನರಹರಿ ನಾರಾಯಣನನ್ನು, ಡಮರುಗದಾರಿ ಮಹೇಶ್ವರನ ಸಂಕೇತವಾಗಿದೆ. ಭುವನೇಶ್ವರಿ ಕನ್ನಡಭಾಷೆಯ ಜನನಿಯಾಗಿದ್ದಾಳೆ ಎಂದು ವರ್ಣಿಸಿದ ಕೆಂಪೇಗೌಡ, ಸಾಹಿತ್ಯ ಸಮ್ಮೇಳನವು ಕನ್ನಡ ನುಡಿಯ ಸುವರ್ಣ ಯುಗಕ್ಕೆ ನಾಂದಿಯಾಗಲಿ ಎಂದು ಹಾರೈಸಿದರು.

ಶ್ರೀ ಕೆಂಪೇಗೌಡರು ಸಂಗಾತಿಯ ಬರಹಗಾರರಾಗಿದ್ದು, 9-4-1997ರಲ್ಲಿ "ಸಂಗಾತಿ" ಉದಯದಂದು ಮುಖ್ಯ ಅತಿಥಿಗಳಾಗಿ ಬಂದು ಶುಭವನ್ನು ಹಾರೈಸಿದ್ದಾರೆ.

-ಸಂಗಾತಿ.

# ಪ್ರಕೃತಿ

ರಾತ್ರಿನ ಕರಿನೆರಳ್‌ನ ಹೋಕನ
ಬೊಳ್ಪ್‌ಕಂತ ಬೆಳ್ಳೆ ಕೋಳಿನೆ ಕೊಂಗ್‌ಕನ
ಕೋಗಿಲೆ ಅದರದೊಂದ್ ರಾಗನೆ ಹಾಡ್‌ಕನ
ಕಾಗೆ ನಾನೇನ್ ಕಮ್ಮಿ ಇಲ್ಲೇಂತ ಹೇಳಕನ
ಎದ್ದ್ ನೋಡ್ದೆ ನಾ ಆಕಾಶಲಿ ಬಣ್ಣ ಬರ್ದಂಗಿತ್ತು.

ನಾ ನೋಡ್ದ ಪೊರ್ಲ್ನ ನೀವ್ಲೆ ಹಾಂಗೇನೇ ಹೇಳಿರೆ
ನಾನೇಕೆ ಕುಯಿಯಾತ್‌ಲ್ಲೆ ಹೀಗೆ ನೋಡ್ದೆಲ್ಲ ಬರೆಯಕೆ
ಆದೆ ನಂಗೆ ಸಮಾನ್ಯ ಕವಿಗೋಷ್ಠಿಲಿ ಬರೆಯಕೆ
ದೇವಕನ ಬೇಡಿನೆ ನನ್ನ ಕವಿಯಾಗಿ ಮಾಡಿಕೆ
ಚಿತ್ರದವನ ಚಿತ್ರಂದೆಚ್ಚ ಬಾನಲಿ ಬಣ್ಣ ಬರ್ದಿತ್ತ

ಹಕ್ಕಿಗೆಲ್ಲ ಹಾಕ್ಕನ ಚುಕ್ಕಿ ನಂಗೆ ಕಾಂಬತಿತ್
ಜಾಲಿ ಇದ್ದ ಹೂಗ ಎಲ್ಲ ಮೆಲ್ಲಂಗೆ ಅರಳ್‌ತ್ತಿತ್
ಕರೆಲೇ ಇರುವ ತೋಟಂದ ಸಿಂಗಾರ ಪರ್ಮಳ ಬರ್ತಿತ್
ತಂಪು ಗಾಳಿ ನನ್ನ ಮೈಯೆಲ್ಲ ಸೋಂಕಾಕನ
ಅರ್ಳಿದಾ ಹೂಗ ಎಲ್ಲ ಪರ್ಮಳ ಬೀರಕನ
ಹರಿವ ನೀರಿನ ಜುಳು ಜುಳು ಶಬ್ದಗ ಕೇಳ್ಕನ

ಸೂರ್ಯ ಬೆಳ್ಕಲಿ ಇರ್ಪ ಶಕ್ತಿನ ನೆನ್ಸ್‌ಕನ
ಪ್ರಕೃತಿನ ಮೀರ್ಪ ಶಕ್ತಿ ಯಾರಿಗುಟ್ಟು
ಬದ್‌ಕ್‌ನಾ ನೋವುನೆಲ್ಲ ಮರ್ಸುವಾಂಗುಟ್ಟು
ಬಾಡ್ದ ಮೋರೆಲಿ ನಗೆನ ಹೊರಡ್ಸುವಾಂಗುಟ್ಟು
ಬೆಂದ ಜೀವಕೆ ಶಕ್ತಿ ಕೊಡುವಾಂಗುಟ್ಟು.

-ಶ್ರೀಮತಿ ವೇದಾವತಿ ಅನಂತ, ನಿಡಮಲೆ.

---

## ಹನಿಗವನಗಳು :

**ಜೀವನ**

ಪ್ರತಿಕ್ಷಣಕ್ಕೂ
ಅಪಾಯಕಾರಿ ತಿರುವುಗಳಿಂದ
ಕೂಡಿರುವ
ಪಶ್ಚಿಮ ಘಟ್ಟದ ರಸ್ತೆಗಳು!

**ಮನಸ್ಸು:**

ಎತ್ತೆತ್ತಲೋ
ಚಲಿಸುವ
ಕಡಿವಾಣ ಹಾಕಬಹುದಾದ
ಕುದುರೆ!

**ಪ್ರೀತಿ:**

ನೀರೆರೆದು
ಪೋಷಿಸಿದಂತೆ
ಮೊಗ್ಗರಳಿ
ಉದುರಿ ಹೋಗುವ ಹೂವು?

**ಆಶ್ವಾಸನೆಗಳು:**

ಚುನಾವಣೆಯ ಮಳೆಗೆ
ಮತದಾರನ ಮನದಲ್ಲಿ
ಬಿತ್ತಲಾಗುವ
ಜೊಳ್ಳು ಬೀಜಗಳು!

**ಲಂಚ :**

ಕೆಲಸವೆಂಬ
ಮೋಟಾರು ಸುರುವಾಗಲು
ಕೊಡಬೇಕಾದ ಜರ್ಕ

ರಚನೆ: ಪೊನ್ನೇಟಿ ಬಿ. ಸುನೀಲ್
ಕೊಪ್ಪ ಅಂಚೆ.



ಸಂಗಾತಿಯನ್ನು ಒಲೆಗೊಂದರಂತೆ
ಸದಸ್ಯರಾಗಿ ಕೊಂಡು ಓದಿ.

---

ಕೊಟ್ಟದ್ದು ತನಗೆ, ಬಚ್ಚಿಟ್ಟದ್ದು ಪರರಿಗೆ

# ಕಳುವಾದ ಕಿಡ್ನಿ!

ಆಚೆ ಮನೆ ಕೂಸಣ್ಣ ನ ಹೆಣ್ಣ್ ಅಮ್ಮ ಣಿಗೆ ಹೊಟ್ಟೆ ಬೇನೆ ವಾಸಿ ಆಗದೆ [illegible] ಆಸ್ಪತ್ರೆಗೆ ಎಡ್‌ಮಿಟ್ ಮಾಡಿ ಹೋದಂವ ಎರಡ್ ವಾರ ಬಾತೇ ಇಲ್ಲೆ. ಮನೆ ದೂರ. ಆಟಿತಿಂಗ ನಾಟಿಕೆಲ್ಸ ಬೇರೆ ಪೇಟೆಗೆ ಬಾಕೆ ಕೈಲಿ ಕಾಸೂ ಇಲ್ಲೆ. ಕಳ್ದ ಶುಕ್ರವಾರ ಎರಡ್‌ಗಂಟೆಗೆ ಆಸ್ಪತ್ರೆಗೆ ಬಾಕನ ಅಮಣಿನ ಮುಖ ಬೇಕಾ (ಬೆಂಣ) ಕಚ್ಚಿದಂಗೆ ಇಷ್ಟ್ ತೋರವುಟ್ಟು!

ಕಣ್ಣಲ್ಲಿ ನೀರ್ ತುಂಬಿ ಕೆನ್ನೆಲಿ ಹರ್‌ದ ಗುರ್ತ್ ಕಂಡದೆ. ಕೂಸಣ್ಣಾ ಅಮ್ಮ ಣಿನ ಬರಿಲಿ ಕುದ್ದ್, ಮನೆಂದ ತಂದ ಬುತ್ತಿನ ಕೊಟ್ಟ್ "ಅಮ್ಮ ಣಿ ಕೈಲಿ ದುಡ್ಡಿತ್ತ್‌ಲೆ, ಮನೆಲಿ ಅವವಂಗೆ ಬೇರೆ ಸುಖ ಇಲ್ಲೆ. ಮಕ್ಕಳ ಸುಧಾರ್ಸಿಕಣಕು, ಹೂಡಿಕೆ ಹೋಕು ಮಧ್ಯಾಹ್ನದ ಮೇಲೆ ಯಾಗೋಳು ಪುಣೆಕಡಿಯಕೆ ಇತ್ತ್. ಅದರಲ್ಲಿ ಬುಟ್ಟೆನಾ ಹಂಗೆ ಬಾದು ಹೇಳ್? ಅದಕ್ಕೆ ನೀ ಸಿಟ್ಟ್ ಮಾಡಿಕಂಡ್ ಮುಖ ತೋರ ಮಾಡಿಕಂಡ್ ಮರ್ಸರೆ ನಾನ್ ಏನ್ ಮಾಡ್ದು ಹೇಳ್"? ತ ಅವಳ ತಲೆನೊಮ್ಮೆ ಪೂಜಿತ್.

"ಅಯ್ಯೊ ನಿಮ್ಮ ಮೆಲೆ ಸಿಟ್ಟ್ ಮಾಡ್‌ತ್‌ಲೆಪ್ಪ, ನನ್ನ ಕಿಡ್ನಿನ ಹಾರಿಸ ಬುಡ್ತಲೆ ಅದಕ್ಕೆ" ತ್ತೇಳಿ ಮಾತ್ ನಿಲ್ಕಕೆ ಮುಂದೆ ಕೂಸಣ್ಣ ಕಟ್ಲಂದ ಹಾರಯೇ ಬುಡ್ತ್!" ಅಂದನ ಮಾತ್ರ ಇಂದ್ ಮಾಡ್ಲುದುಲ್ಲೆ ಎಲ್ಲ ಹೋತಂದ? ಇಂತರ ವರನಂಬಿ ನಾವು ಆಸ್ಪತ್ರೆಲಿ ಕಾಯಿಲಸ್ತರ ಎಡ್‌ಮಿಟ್ ಮಾಡುದಾ"? ತ್ತೇಳಿಕಂಡ್ ಹಾರ್‌ಕನ ಸ್ಪೂಲಿಗೆ ಎಡ್‌ಗಿ ಕನ್ನಡಿ ಬಾಗಿಲ್‌ಗೆ ಡಿಕ್ಕಿ ಹೊಡ್ದ್ ಕನ್ನಡಿ ಒಡ್ದ್ ಎದೆಗೆ ಪೆಟ್ಟಾಗಿ ಮೆಯೆಲ್ಲಾ ರಕ್ತ ಆತಂ.

ಒಂದು ವಾರಕ್ಕೆ ಮುಂದೆ ಬೆಂಗ್ಳೂರಂ ಆಸ್ಪತ್ರೆಲಿ ಇರ್ರಬ್ ಡಾಕ್ಟ್ರಗ ಸೇರಿ ಕಂಡ್ ಒಬ್ಬ ಪೇಶಂಟ್‌ನ ಕಿಡ್ನಿನ ನಕಳು ಮಾಡ್ದ ವಿಚಾರ ಕೂಸಣ್ಣ ಪೇಪರಲಿ ಒದಿತ್ತ್. ಈಗ ನಮ್ಮ ಊರ್‌ಲಿ ಇಂತ ಕತೆ ಸುರಾಗೋತಲೆ. ಇನ್ನ್ ಸುಮ್ಮ ನಿದ್ದರೆ ಆಕಿಲೆ ತೇಳಿ ಕಂಪ ಸುರು ಮಾಡ್ಕನ ವಾರ್ಡ್‌ಲಿ ಇದ್ದವು ತೀರಾ ರಂಪ ಸುರು ಮಾಡಿಬುಟ್ತೋ! ಕೂಸಣ್ಣ ನ ಕಿಡ್ನಿನೇ ಕದ್ದಿರಕೂತ ಎಲ್ಲವೂ ಗ್ಯಾಮ ಮಾಡಿಕಂಡ್ ಗುಡ್ಡೆ ಕೂಡಿ ಬುಟ್ಟೊ! ಯಾರ ಕಿಡ್ನಿ? ಯಾರ್ ಕದ್ದವು? ಯಾಗ ಎಲ್ಲಿ? ಇದೆಲ್ಲ ಕೇಳುವಂವ ಯಾರ್. ಹೇಳುವಂವ ಯಾರ್? ಯಾರಿಗೆ ಏನೂ ಗೊತ್ತ್ಲೆ! ಎಲ್ಲರ ಬಾಯಿಲೂ ಕಿಡ್ನಿ ತೆಗಬ ಗಡಾತ! ಮಧ್ಯಾಹ್ನ ಊಟಕೆ ಹೋದ ರಮೇಶ ಡಾಕ್ಟ್ರ ಊಟ ಮಾಡಿ ಬಾಕನ ಆಸ್ಪತ್ರೆ ಗೇಟ್‌ಲಿ ಭಾರೀ ಗುಡ್ಡೆ ಗುಡ್ಡೆ ಜನ. ಕಾಯಿಲಸ್ರೆಲ್ಲ ಕೆಂಪು ಕಂಬಳಿ ಹೊದ್ದ್ ಕಂಡೇ ಬಂದ್ ಬುಟ್ಟಿದ್ದೊ! ಡಾಕ್ಟರ್‌ನ ಕಾಂಬಕನ "ಅಂವನೆ, ಅಂವನೆ ಹಿಡಿಯಿರಿ ಬಡಿಯಿರಿ, ಅಂವನ ಕಿಡ್ನಿನೆ ತೆಗಿಯಿಲಿ 'ತ ತಮಿಳ್, ಕನ್ನಡ ಮಲೆಯಾಳ ತುಳು ಎಲ್ಲಾ ಭಾಷೆಗಾರರೂ ಕೂಗಾಡ್ತಿದ್ದೊ! ಸಂಗತಿ ಎಂತಡ್‌ತ ಡಾಕ್ಟ್ರಗೆ ಹೇಳುವ ಮಾತ್ರ ಯಾರೂ ಇಲ್ಲೆ! ಗಲಾಟೆ ಸುರಾಕನ ವಾರ್ಡ್‌ಬಾಯಿ ಪೊಲೀಸ್‌ಗೆ ಪೋನ್ ಮಾಡಿ ಆಗಿತ್ತ್ ಪೊಲೀಸ್ ಜೀಪ್ ಬಂದ್ ಬುಡ್ತ್!

ಇದೇನೊ ಇಂದ್ ನನ್ನ ಗ್ರಾಚಾರ ಸರಿ ಇಲ್ಲೇತ ಗ್ಯಾಂನ ಮಾಡಿ ಡಾ!! ರಮೇಶ ಬಿಳಿಕೋಟು ಮತ್ತೆ ಸ್ಪೆತಸ್ಕೋಪ್‌ನ ಬಿಸಾಡಿ ಒಂದು ಆಟೋ ಹತ್ತಿ ಜನರ ಗುಂಪ್‌ದ ತಪ್ಪಿಕಂಡ್ ಓಡಿಬುಡ್ತ್!

ಪೇಪರ್‌ನವ್ರು. ಫೋಟೊ ತೆಗೆವ್ರು ಎಲ್ಲಾ ಒಂದೇ ಬುಟ್ಟೊ ಡಾಕ್ಟರ್‌ನ ಈಗ ಎರೆಸ್ಟ್ ಮಾಡಿ ಹಿಡ್ಕಂಡ್ ಬಂದವೇ ತ ಪೊಲೀಸ್‌ನವ್ರು ಜನಕೆ ಭರವಸೆ ಕೊಟ್ಟು, ಇಷ್ಟೆಲ್ಲಾ ಗಲಾಟೆ ನಡೆಕನ ಕೂಸಣ್ಣ ಹೆಣ್ಣ್‌ನ ಕರ್ಕಂಡ್ ಊರಿಗೆ ಬಸ್ಸ್ ಹತ್ತೆ ಬುಡ್ತ್.

ರಮೇಶ ಡಾಕ್ಟರ್ ಎರಡ್ ದಿ ಯಾರ ಕಣ್ಣಿಗೂ ಬೀಳದೆ ಗೋಪಾಲ ಲಾಯರ್‌ನ ಹಿಡ್ದು ನಿರೀಕ್ಷಣಾ ಜಾಮೀನ್ ತೆಗ್ದೂ ಕೋಟ್ ಲಿ ಕೇಸ್ ವಿಚಾರಣೆ ಬಾಕನ ಡಾಕ್ಟರ್" ನಾನ್ ಒಂದು ವಾರುದ ಒಂದೇ ಒಂದು ಆಪರೇಷನ್ ಮಾಡ್ತ್‌ಲೆ" ತ ಎಫಿಡವಿಟ್ ಕೊಟ್ಟೊ, ಕಿಡ್ನಿ ಕಳಕಂಡ ರೋಗಿನ ಕೋರ್ಟ್‌ಗೆ ಹಾಡರ್ ಪಡ್ಸಕೂತ ಲಾಯರ್ ವಾದ ಮಾಡ್ದೊ ಆಸ್ಪತ್ರೆ ದಾಖಲಾತಿ ಪುಸ್ತಕ ಎಲ್ಲ ಹುಡ್ಕಿ ಅಮ್ಮ ಣಿನ ಆಡ್ರೆಸ್ ಪತ್ತೆ ಮಾಡಿ ಪೋಲೀಸ್‌ನವ್ರು ಕೋರ್ಟ್‌ಗೆ ಹಾಜರ್ ಪಡ್ಸಿದೊ ದೇವರ ಮುಂದೆ ಸತ್ಯ ಹೇಳ್ಸಿತ ಅಮ್ಮ ಣಿನ ಪ್ರಮಾಣ ಮ ಆಡ್ಸಿ ಲಾಯರ್ ಒಂದೊಂದೇ ಪ್ರಶ್ನೆ ಕೇಳ್ದೊ

ಲಾಯರ್ :
ನಿನ್ನ ಕಿಡ್ನಿ ತೆಗ್ದದ್ ನಿಜನಾ ಅಮ್ಮ ಣಿ?

ಅಮ್ಮ ಣಿ: ನಾ ಸುಳ್ಳು ಹೇಳಿಕಿಲೆ ದೇವರಾಣೆ ನಿಜ.

ಲಾಯರ್: ಕಿಡ್ನಿ ಹೆಂಗೆ ಇದ್ದರೆ ನಿಂಗೆ ಗೊತ್ತುಟಾ? ನಿನೋಡಿಯಾಳಾ?

ಅಮ್ಮ ಣಿ: ಗೊತ್ತಿಲ್ಲದೆ ಉಟ್ಟಾ? ಅದ್ ಗೇರ್‌ಬೀಜ ತರ ಇದ್ದದೆ.

ಲಾಯರ್: ನಿನ್ನ ಎಷ್ಟ್ ಕಿಡ್ನಿಗಳ ತಗ್ದೊ? ಒಂದು ಎರಡಾ?

ಅಮ್ಮ ಣಿ: ಇಡಿ ಅಲ್ಲ ಅರ್ಧ, ಒಂದು ಹೋಳು ಮಾತ್ರ!

ಲಾಯರ್: ಡಾಕ್ಟರ್‌ನ ತೋರ್ಸಿ, ಇದೇ ಡಾಕ್ಟರ್ ಆಪರೇಶನ್ ಮಾಡ್ದಾ?

ಅಮ್ಮ ಣಿ: ಆಪರೇಷನ್ ಮಾಡ್ತ್‌ಲೆ

ಲಾಯರ್: ಆಪರೇಶನ್ ಇಲ್ಲದೆ ಕಿಡ್ನಿ ತೆಗ್ದ್ ಹೆಂಗೆ?

ಅಮ್ಮ ಣಿ: ನನ್ನ ಬಟ್ಲಂದ್ ತೆಗ್ದದ್ ಅದಕ್ಕೇಕೆ ಆಪರೇಷನ್?

ಕೋರ್ಟ್‌ಲಿ ಎಲ್ಲು ನಗಾಡಿ ಬುಟ್ಟು, "ನಡ್ದ ಕಥೆನ ಒಮ್ಮೆ ಸರಿ ಹೇಳಕ್ಕಾ, ತ ಜಡ್ಜ್ ಕೇಳ್ದೊ ಆಗ ಅಮ್ಮ ಣಿ ನಡ್ದ ಕತೆ ಹೇಳ್ತ್, "ನೋಡಿ ಅಂದ್ ಮಧ್ಯಾಹ್ನಕ್ಕೆ ಮಾಸ ಗೈಪು ಮಾಡಿದ್ದೊ ನನ್ನ ಎದ್ರ್ ಕಟ್ಲೆಲ್ಲಿ ಇದ್ದ ಮಾಪಳಿಗೆ ಒಂದು ಮೂಳೆ ಮಾತ್ರ ಬಿದ್ದದ್. ನಂಗೆ ಒಂದು ಹೋಳು ಕಿಡ್ನಿ ಬಿದ್ದಿತ್ ನಾನ್ ಕೈತೊಳೆಯಕೆ ಬಾತ್ ರೂಮಿಗೆ ಹೋಗಿ ಬಾಕನ ನನ್ನ ಬಟ್ಲಂದ್

ಧನಮೂಲಂ ಇದು ಜಗತ್ - ಗಾದೆ

ನನ್ನ ಕಿಡ್ನಿ ತೆಗ್ದ್ ಬುಟ್ಟ್. ಮೂಳೆನ ಹಾಕಿ ಮಡ್ಗಿತ್! ಈ ಸಂಗತಿನ ನನ್ನ ಗಂಡಂಗೆ ಹೇಳ್ದೆ. ಅಷ್ಟೆ, ನಡ್ದೆದ್ ಮತ್ತೇನೂ ನಂಗೆ ಗೊತ್ಲೆ"ತ ಹೇಳ್ತ್.

ಡಾ|| ರಮೇಶನ ಬಿಡುಗಡೆ ಮಾಡ್ಲೊ ಆ ಕುಸಿಲಿ ಡಾಕ್ಟರ್ "ಹೊ" ತ್ತೇಳಿ ಲಾಯರ್‌ನ ತಬ್ಬಿ ಹಿಡ್ಕಂಡತ್! ಆ ಹಿಡ್ತಕ್ಕೆ ಒಟ್ಟಿಗೆ ಮಲ್ಗಿದ್ದ ಹೆಣ್ಣ್‌ನ ಕೈಲಿ ಬಳೆಗ ಚೂರಾಗಿ ಅವಳ ಕೈಲಿ ಅರ್ಧ ಇಂಚ್ ಗಾಯ ಆಗಿ "ಸೀವ್‌ಗೇನೆ ಸೂಯೆ ಇಲ್ಲೆ?" ತನಿ ಕಿರ್ಚಿಕಾಕನ ಡಾಕ್ಟರ್ ತಾನ್ ಕಂಡ ಕನ್ಸ್‌ನ ಹೇಳಿಕೊಟ್ಟೊ?

-ಬಾಚರಣಿಯಂಡ ಅಪ್ಪಣ್ಣ
ಅಧ್ಯಕ್ಷರು, ಕೊಡವ ಸಾಹಿತ್ಯ ಅಕಾಡೆಮಿ.

## ಹೆಲ್ಮೆಟ್ ಎಂದರೇನು?

ಒಂದ್ ದಿನ ಹಳ್ಳಿ ಮಕ್ಕ ಎಲ್ಲಾ ಪೇಪರ್ ಓದಿಕಂಡ್ ಏಪ್ರಿಲ್ ಒಂದರಿಂದ ಹೆಲ್ಮೆಟ್ ಕಡ್ಡಾಯ ಅಂತ ಸುದ್ದಿ ಓದಿದೊ, ಅದ್ ಎಂತದೂತ ಯಾರಿಗೂ ಅರ್ಥ ಆತ್‌ಲೆ. ಎಲ್ಲವೂ ಸೇರಿಕ್ಕಂಡ್ ಪಕ್ಕದ ಮನೆ ಕಾಳಪ್ಪ ಮಾಸ್ಟರ್ ಹತ್ರ ಹೋಗಿ ಕೇಳ್ದೊ. ಹೆಲ್ಮೆಟ್‌ತ್ತೇಳಿರೆ ಗೊತ್ತಿಲೆನಾ ಮಕ್ಕಳೆ, ನೀವ್ ಎಂತ ದಡ್ಡಂಗತ ಹೇಳ್ತ್. ಬೈಕ್ ಸ್ಕೂಟರಿಲಿ ಹೋಕನ ತಲೆ ಮ್ಯಾಲೆ ಪಾರಸ್ಟ್ ಹ್ಯಾಟ್‌ನಂಗೆ ಹಾಕಂಬಲೆ ಅದ್‌ತ ಹೇಳ್ತ್. ಅಕಸ್ಮಾತ್ತಾಗಿ ತಲೆಗೆ ಪೆಟ್ಟ್ ಬಿಳ್ದಂಗೆ ಹಾಕ್ಕೊಂಬದು. ಕನ್ನಡಲಿ ಶಿರಸ್ತ್ರಾಣತ ಹೇಳುವೆ. ಈ ಬೊಡ್ಡ್ ಮಕ್ಕಳಿಗೆ ಅರ್ಥನೆ ಆತ್‌ಲೆ. ಆಗ ಕಾಳಪ್ಪ ಮಾಸ್ಟರ್ ನಿಧಾನವಾಗಿ ಬಿಡ್ಸಿ ಬಿಡ್ಸಿ ಹೇಳ್ತ್. ಶಿರಸ್ತ್ರಾಣತ ಹೇಳಿರೆ 2 ಚಕ್ರದ ವಾಹನನ ಓಡ್ಸ್‌ಕಾಕನ ಹಾಕಂಬ ಟೊಪ್ಪಿ ತರ್‌ದ್ದ್ ಅಂದರೆ ಹೇಲು+ಮೆಟ್ಟು= ಹೆಲ್ಮೆಟ್ಟ್‌ತ್ ಹೇಳಿಕೊಟ್ಟದೆ.

- ಕುದುಪಜೆ ಬಸಪ್ಪ
ಶಕ್ತಿ ವರದಿಗಾರ, ಕುಶಾಲನಗರ

## ಹುಳಿ ತಂದ ಪೇಚ್ (ಕಿತ್ತ ಳೆಹಣ್)

ನಾನಾಗ ಸಣಾವ ಪಂಡೊಮ್ಮೆ ನಾನ್ ಬೆಟ್ಟಗೇರಿ ಮಿಡ್ಲ್ ಸ್ಕೂಲಿಂದ ಮನೆಗೆಬಾದು. ಮನೆಗೆ ಸ್ಕೂಲ್‌ಂದ ಮೂರು ಮೈಲಿಗೂಹೆಚ್ಚಿಗೆ ನಡೆಯಕು. ಒಂದ್ ದಿನ ಪನ್ನೇಟಿ ಬಕ್ಕ ಹತ್ರ ಬಾಕನ ಹುಳಿ ತಿಂಬಕೆ ಗ್ಯಾನ ಆತ್. ಹತ್ರಲ್ಲೆ ಹುಳಿ ತೋಟ ಇತ್ತ್. ಹಣ್‌ಗ ತುಂಬಾ ಜೋತ್‌ಕಂಡ್ ಕೆಂಪಾಗಿತ್ತ್. ಕೆಲ್ವು ಕೆಳಕ್ಕೆ ಬಿದ್ದ್‌ಕಂಡ್ ಇತ್ತ್. ನಾನ್ ಆಚೆ ಈಚೆ ನೋಡ್ತಾ ಮೆಲ್ಲಂಗೆ ಬೇಲಿ ಸೆರೆಲೆ ನುಗ್ಗಿದೆ. ಆಗ ಬೇಸಿಗೆ ಕಾಲ ಬ್ಯಾರೆ. ಕೆಂಪ ನಡ್ಡಂಗೆ ಮೆಲ್ಗೆ ಹೆಜ್ಜೆ ಹಾಕಿದೆ. ಅಷ್ಟರಲಿ ಹುಳಿ ತೋಟದಂವ ಎಲ್ಲಿತ್ತೋ ಏನೋ ದಿಢೀರ್ ಆಗಿ ಪ್ರತ್ಯಕ್ಷ ಆತ್. ಇನ್ನೇನ್ ಹತ್ರ ಬಂದ್ ಹೊಡ್ದೆ ಬುಟ್ಟತ್‌ತ್ತೇಳಿ ಗ್ಯಾನ ಮಾಡ್ದೆ. ಆಗ ಅಲ್ಲೊಂದು ದೊಡ್ಡ ಗೋಳಿ ಮರ ಇತ್ತ್. ಮರದ ಬೇರ್‌ಗ ಅಗಲ ಆಗಿ ಸುಮಾರ್ ದೂರ ಹರಡಿಕಂಡ್ ಇತ್ತ್. ನಾನ್ ಏನ್‌ತ ಗ್ಯಾನ ಮಾಡದೆ ಸೀದಾ ಮರದ ಬೇರ್‌ಲೇ ಮರ ಹತ್ತಿ ಬುಟ್ಟೆ. ಹತ್ತಿ ಕಂಡೆ ಹೋಕನ ಮರದ ಮಾಳಿಯೊಳಗೊಂದು ಜೇನು ಕುಡಿ. ನಾನ್ ಅದರ ಹತ್ರ ಬಗ್ಗಿ ಉರ್‌ಗಿ ಕಂಡೆ ಸ್ವಲ್ಪ ಹೊತ್ತು ಕಳ್ದೆ. ಆಗ ತೋಟದವ ಎಂತಾ ಕುಳ್ಳ ಅದ್? ತೇನಾತ ಕೇಳ್ತ್. ಅಕ್ಕೂತ ನಾನ್ ಹೇಳ್ದೆ. ಆಗ ಹೆಂಗೋ ಆಗಿ ನಾನ್ ಬೆನ್ಸ್ ಕೆಳಗಾಗಿ ಅಂಗಾತ ಮರಂದ ಬಿದ್ದ್ ಬುಟ್ಟೆ. ದೇವರ ದಯೆಂದ ನಂಗೆ ಏನ್ ಆತ್ಲೆ. ಅತ್ತಹುಳಿ ಇಲ್ಲದೆ ಇತ್ತ ಕುಂಟಿಕಂಡ್ ಬೇಲಿಂದ ಹೊರಗೆ ಬಂದೆ. ಅಂದ್‌ಂದ ಇಂತ ಕೆಲ್ಸಕ್ಕೆ ನಾನ್ ಇಳ್ತ್‌ಲೆ.

ಪಿ. ಯಂ. ಪಿ. ಅವಂದೂರು,

## ವಡ್ಪ ಕಥೆ

| | | | |
|---|---|---|---|
| 1) | ಪೂಜಾರಿ ಒಳಗೆ, ದೇವ್ರು ಹೊರಗೆ- ಇದ್ ಎಂತ? | - | ಎಸಂಡ್ |
| 2) | ಸೈನಿಕರ್‌ಹಿಂದೆ ರಾಜಮುಂದೆ- ಇದ್ ಎಂತ? | - | ಬಾಳೆಗೊನೆ |
| 3) | ಎಂಟ್‌ಕಾಲ್‌ಸೊಂಟ ಮುಕ್ಕ -ನೆಂಟರ್- ಬಂದರೆ ಒಳಗೆ ಹುಕ್ಕ- ಇದ್ ಎಂತ? | - | ಎಸಂಡ್ |
| 4) | ಕಣ್ಣ್ ಕಾಣದ ಅಜ್ಜಿ ಪಾಲ ದಾಟುದು - ಇದ್ ಎಂತ? | - | ಉಂಬುಳು |
| 5) | ಸತ್ತ ಎತ್ತ್ ಗುಟ್ರುಹಾಕಿದೆ - ಇದ್ ಎಂತ? | - | ಕೋವಿ |
| 6) | ಅಂಗ್‌ಡಿಂದ ಕುಪಿಲಿತಾದು, ಮನೇಲಿಬಂದ್ ಮರ್ಡುದು- ಇದ್ ಎಂತ? | - | ಈರುಳ್ಳಿ |
| 7) | ಅಂಗ್‌ಡಿಲಿ ಮಾರುದುಲೆ, ತರಾಸ್‌ಲಿ ತೂಗ್‌ದುಲೆ- ಇದ್ ಎಂತ? | - | ಸಗಣಿ |
| 8) | ಕಪ್ಪ್ ಉಟ್ಟು ಕಾಗೆ ಅಲ್ಲ, ರೆಕ್ಕೆ ಉಟ್ಟು ಹಕ್ಕಿ ಅಲ್ಲಾ, ನೀರ್ ಉಟ್ಟು ಬಾವಿ ಅಲ್ಲ, ಹಂಗರೆ- ಇದ್ ಎಂತ? | - | ಕಣ್ |
| 9) | ಚಕ್ಕೆ ಇಲ್ಲದ ಮರದಡಿಲಿ ರಕ್ತ ಇಲ್ಲದ ಮೃಗಮಲ್‌ಗಿದೆ- ಇದ್ ಎಂತ? | - | ಪಾರೆ ಕಲ್ಲ್ |
| 10) | ಅಕ್ಕನ ತೊಡೆ ಬಸುರಿ- ಅದ್ ಎಂತ? | - | ಕೆಸ |
| 11) | ಕಂಪಣ್ಣನ ಕಾಂಬಕಾಕನ ಬೊಳ್ಳಕ್ಕ ಬಸುರಿ ಆದು ಹಂಗಾರೆ ಇದ್ ಎಂತ? | - | ರೊಟ್ಟಿ ಕಾಯ್ಸುದು |
| 12) | ಅಕ್ಕಂಗೆ ಆರ್‌ಕಣ್, ಮುಕ್ಕಂಗೆ ಮೂರ್ ಕಣ್ಣ್ ನನ್ನಂತ ಪಾಪಿಗೆ ಒಂದೇ ಕಣ್ಣ್ ಇದ್ ಎಂತ? | - | ಕೊಳಲು, ತೆಂಗಿನಕಾಯಿ, ಸೂಜಿ. |

-ಕೆ ಇಂದಿರಾ ದೇವಯ್ಯ
ಹೊಸ್ಕೇರಿ

## ವ್ಯತ್ಯಾಸ

ಆಗ ಐಸ್ ಕ್ಯಾಂಡಿಗೆ
ಓಡುವ ಕಾಲವೊಂದಿತ್ತು
ಅಲ್ಲಿ - ಇಲ್ಲಿ ಬ್ಯಾಗಿನ ಮೂಲೆ
ಮೂಲೆಗಳಲ್ಲಿ ಹುಡುಕಾಡಿ-ತಡಕಾಡಿ
ಐವತ್ತು ಪೈಸೆ ಕೊಟ್ಟು ಅದನ್ನು

ಆ ಕಡೆಗೊಮ್ಮೆ ಈ ಕಡೆಗೊಮ್ಮೆ
ಸರಿಸುತ್ತಾ ಕ್ಯಾಂಡಿ ಚೀಪುವ
ಮಜವೇ! ಬೇರೆ!
ಕೆಲವೊಮ್ಮೆ ದುಡ್ಡಿಲ್ಲದೇ ನಾಳೆ
ಕೊಡುತ್ತೇನೆಂದು ದಮ್ಮಯ್ಯ

ಹಾಕಿ ಕ್ಯಾಂಡಿ ಗಿಟ್ಟಿಸಿಕೊಂಡ ಧೀರೆ!
ಈಗಲೂ ಬರುತ್ತಾನೆ ಕ್ಯಾಂಡಿಯವನು
ಸೈಕಲೇರಿ ಅಲ್ಲ
ಸ್ಕೂಟರ್ ಸವಾರರಾಗಿ
ನಾನು ಕೂಡ ಹಾಗೆ ಅಲ್ಲ ಅಂದಿನ

ಫ್ರಾಕ್ ತೊಟ್ಟ ಪುಟ್ಟ ಪೋರಿ
ಈಗ ಸೀರೆ ತೊಟ್ಟ ನಾರಿ
ಅವನೇನೊ ಕೇಳುತ್ತಾನೆ ಬೇಕೆ ಕ್ಯಾಂಡಿ?
ಬೇಡವೆನ್ನಲ್ಲು ಮನಸ್ಸೊಪ್ಪಿತೆ?!
ಖಂಡಿತಾ ಬೇಕೆ ಬೇಕು.

ಆದರೆ ಅಂದಿನಂತೆ ಬೇಕೆನ್ನಲು
ನಾಲಿಗೆ ಮಿಸುಕಾಡುತ್ತಲೇ ಇಲ್ಲ
ಅಲ್ಲೆ ಸ್ತಬ್ಧ ಮೌನ
ಪೈಸೆಗಾಗಿ ಪರ್ಸಿನೊಳಗೆ ಹೊದ
ಕೈಗಳೂ ಹಾಗೆ ಅಲ್ಲೇ ಸ್ತಬ್ಧ

-ಸ್ಮಿತಾ ಅಮೃತರಾಜ್, ಸಂಪಾಜೆ
ಕುಯಿಂತೋಡು, ಮನೆ

## ಬ್ಯಾಡ್ಮಿಂಟನ್‌ಗೆ ಆಯ್ಕೆ



ಸುಳ್ಯದ ನೆಹರು ಸ್ಮಾರಕ ವಿದ್ಯಾಲಯದ ವಿದ್ಯಾರ್ಥಿನಿ ಪಿ. ಎಸ್. ಸುಮತಿ ಅವರು ಇತ್ತೀಚೆಗೆ ತಿರುಪತಿ ವಿಶ್ವವಿದ್ಯಾನಿಲಯದಲ್ಲಿ ಜರುಗಿದ ರಾಷ್ಟ್ರಮಟ್ಟದ ಬಾಲ್ ಬ್ಯಾಡ್ಮಿಂಟನ್‌ಪಂದ್ಯಾಟದಲ್ಲಿ ಮಂಗಳೂರು ವಿವಿಯನ್ನು ಪ್ರತಿನಿಧಿಸಿದ್ದರು. ಈಕೆ ಸೋಮವಾರಪೇಟೆ ನಿವಾಸಿ ಪೊನ್ನಪ್ಪನ ಕೆ. ಸೋಮಯ್ಯ ಹಾಗೂ ದಮಯಂತಿ ದಂಪತಿಯ ಪುತ್ರಿ.

- ಸಂಗಾತಿ

## ಸರ್ವಜ್ಞಸಾರ

ಎಲ್ಲ ಬಲ್ಲವರಿಲ್ಲ। ಬಲ್ಲಿದರುಬಹಳಿಲ್ಲ।
ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯ।
ಎಲ್ಲರಿಗೂ ಇಲ್ಲ ಸರ್ವಜ್ಞ॥

ಒಬ್ಬನಲ್ಲದೆ ಜಗತೆ। ಇಬ್ಬರುಂಟೇ ಮತ್ತೆ?।
ಒಬ್ಬ ಸರ್ವಜ್ಞ ಕರ್ತನೀ ಜಗಕೆಲ್ಲ।
ಒಬ್ಬನೇ ದೈವ ಸರ್ವಜ್ಞ॥

ಆ ದೇವ ಈ ದೇವ। ಮಾದೇವನೆನಬೇಡ।
ಆ ದೇವರ ದೇವ ಭುವನದ ಪ್ರಾಣಿಗಳ।
ಗಾದವನೆ ದೇವ ಸರ್ವಜ್ಞ॥

ಭ್ರಷ್ಟ ದೈವಕೆ ಬಾಯ ಬಿಟ್ಟಲ್ಲಿ ಫಲವಿಲ್ಲ।
ಸೃಷ್ಟಿಗೀಶ್ವರನ ಭಜಿಸಿದರೆ ಮುಂದಕೆ।
ಇಷ್ಟಾರ್ಥವೀವ ಸರ್ವಜ್ಞ॥

ಆದಿ ದೈವವನು ತಾ। ಭೇದಿಸಲಿಕರಿಯದಲೆ।
ಹಾದಿಯಾ ಕಲ್ಲಿ ಗೆಡೆಮಾಡಿ ನಮಿಸುವ।
ಮಾದಿಗರ ನೋಡು ಸರ್ವಜ್ಞ॥

ತನ್ನಲಿಹ ಲಿಂಗವನು। ಮನ್ನಿಸಲಿಕರಿಯದೆ।
ಬಿನ್ನಣದಿ ಕಟೆದ ಪ್ರತಿಮೆಗಳಿಗೆರಗುವ।
ಅನ್ಯಾಯ ನೋಡು ಸರ್ವಜ್ಞ॥

ಕಲ್ಲು ಕಲ್ಲೆಂಬುವಿರಿ। ಕಲ್ಲೊಳಿಪ್ಪುದೆ ದೈವ?।
ಕಲ್ಲಲ್ಲಿ ಕಳೆಯ ನಿಲಿಸಿದ ಗುರುವಿನ।
ಸೊಲ್ಲಲ್ಲೆ ದೈವ ಸರ್ವಜ್ಞ॥

ನಂಬುತಿರು ನಂಬದಿರು। ಎಂಬುವರು ಮಾನವರು।
ಸಂಬಾರವರೆವ ಬಲುಕಲ್ಲ ಹರನೆಂದು।
ನಂಬುವವರಾರು? ಸರ್ವಜ್ಞ॥

ಪ್ರಾಣನೂ ಪರಮನೂ। ಕಾಣದಲೆಒಳಗಿರಲು।
ಮಾಣದಲೆ ಶಿಲೆಯ ಪಿಡಿದದಕೆ ಮೂರ್ಖತಾ।
ಪ್ರಾಣಾತ್ಮ ನೆಂಬ ಸರ್ವಜ್ಞ॥

ಗುಡಿಯಬೋದಿಗೆ ಕಲ್ಲು। ನಡುರಂಗ ತಾ ಕಲ್ಲು।
ಕಡೆಮೂಲೆ ಸೆರಗು ತಾ ಕಲ್ಲು. ವರವನು।
ಕೊಡುವಾತ ಬೇರೆ ಸರ್ವಜ್ಞ॥

ಭಕ್ತಿಯಿಂದಲೆ ಮುಕ್ತಿ। ಭಕ್ತಿಯಿಂದಲೆ ಶಕ್ತಿ।
ಭಕ್ತಿ-ವಿರಕ್ತಿಯಳಿದಿರೀ ಜಗದಲಿ।
ಮುಕ್ತಿಯಿಲ್ಲೆಂದ ಸರ್ವಜ್ಞ॥

# ಡಾಕ್ಟರೇಟ್ ಪುರಸ್ಕಾರ



ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಸಿ. ಕೆ. ಕಿಶೋರ್‌ಕುಮಾರ್ ಅವರು ಮಂಡಿಸಿರುವ ಎಕ್ಸ್ ಪ್ಲೋರಿಂಗ್‌ದಿ ಸ್ಕೋಪ್‌ಆಫ್ ಸ್ಪಾನ್ಸರ್ ಶಿಪ್ ಫಾರ್‌ದಿ ಪ್ರಮೋಶನ್ ಆಫ್‌ಸ್ಪೋರ್ಟ್ಸ್‌ಇನ್ ದಿ ಯೂನಿವರ್ಸಿಟಿ ಪ್ರಬಂಧಕ್ಕಾಗಿ ಡಾಕ್ಟರೇಟ್ ಪುರಸ್ಕಾರ ಲಭಿಸಿದೆ. ಕಿಶೋರ್ ಕುಮಾರ್ ಅವರು ಸುಳ್ಯ ತಾಲೂಕು ಬಾಳುಗೋಡು ನಿವಾಸಿ ಚೆಟ್ಟಿಮಾಡ ದಿ. ಕೃಷ್ಣಪ್ಪ ಹಾಗೂ ಸಿ. ಕೆ. ದೇವಳ ದೇವಿ ದಂಪತಿಯ ಪುತ್ರ.

- ಸಂಗಾತಿ

# ಗೋಕರ್ಣದಲ್ಲಿ ಹವ್ಯಕ ಜನ ಜಾಗೃತಿ ವಿಶ್ವ ಸಮ್ಮೇಳನ

ಕೃಷಿ ಹೈನುಗಾರಿಕೆ, ಉದ್ಯೋಗ ಮತ್ತಿತರ ಕ್ಷೇತ್ರಗಳಿಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳಿಗೆ ಚಾಲನೆ ನೀಡುವ ನಿಟ್ಟಿನಲ್ಲಿ ಅಗ್ನಿ ಸೇವಾ ಟ್ರಸ್ಟ್‌ಸಂಸ್ಥೆಯು ಏ. 27ಮತ್ತು 28 ರಂದು ಉತ್ತರ ಕನ್ನಡ ಜಿಲ್ಲೆಯ ಗೋಕರ್ಣದಲ್ಲಿ ಹವ್ಯಕಜನ ಜಾಗೃತಿ ವಿಶ್ವ ಸಮ್ಮೇಳನ ಹಮ್ಮಿ ಕೊಂಡಿತು.

ಶ್ರೀ ಕ್ಷೇತ್ರ ಗೋಕರ್ಣದ ಬ್ರಹ್ಮರ್ಷಿ ದೈವರಾತ ನಗರದ ಭದ್ರಕಾಳಿ ಪ್ರೌಢಶಾಲೆಯಲ್ಲಿ ನಡೆಯಲಿರುವೀ ಸಮಾವೇಷದಲ್ಲಿ ಕೃಷಿ ಮಾರುಕಟ್ಟೆ, ಉದ್ಯೋಗಾವಕಾಶ ನಿರ್ಮಾಣ ಭ್ರೂಣಹತ್ಯೆ ಮತ್ತಿತರ ಪ್ರಮುಖ ವಿಚಾರಗಳ ಬಗ್ಗೆ ಚರ್ಚಿಸಿ ಕೆಲವು ನಿರ್ಣಯಗಳನ್ನು ಕೈಗೊಳ್ಳಲಾಯಿತು ಎಂದು ಟ್ರಸ್ಟ್ ಕಾರ್ಯಾಧ್ಯಕ್ಷ ಬಿ. ಜಿ. ಶ್ರೀಧರ್ ಹಾಗೂ ಪ್ರಧಾನ ಕಾರ್ಯದರ್ಶಿ ವಿ. ಆರ್. ಹೆಗಡೆ ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದ್ದಾರೆ.

ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅಡಿಕೆ ಬೆಳೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಯಿತು. ಯುವಜನತೆಗೆ ಉದ್ಯೋಗಾವಕಾಶ ಹಾಗೂ ಮಹಿಳೆಯರ ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಗೋಷ್ಠಿಗಳನ್ನು ನಡೆಸಲಾಯಿತು.

ಉನ್ನತ ವ್ಯಾಸಂಗ ಬಯಸುವ ಬಡ ಮತ್ತು ಪ್ರತಿಭಾವಂತರಿಗೆ ಶಿಷ್ಯವೇತನ ನೀಡುವ ಉದ್ದೇಶದಿಂದ 'ವಿದ್ಯಾನಿಧಿ ಹೆಸರಿನಲ್ಲಿ ಶಾಶ್ವತ ನಿಧಿ ಸ್ಥಾಪಿಸಲಾಯಿತು. ಆಧುನಿಕ ಕೃಷಿ ಪದ್ಧತಿ ಕೈಗಾರಿಕಾ ಅಭಿವೃದ್ಧಿ ಮುಂತಾದ ವಿಚಾರಗಳ ಬಗ್ಗೆಯೂ ಚರ್ಚೆ ನಡೆಯಿತು.

ಶ್ರೀ ರಾಮಚಂದ್ರಾಪುರಮಠದ ಶ್ರೀ ರಾಘವೇಶ್ವರ ಭಾರತೀ ಮಹಾಸ್ವಾಮಿ ಹಾಗೂ ಶ್ರೀ ಸ್ವರ್ಣವಲ್ಲಿ ಮಠದ ಶ್ರೀಗಂಗಾಧರೇಂದ್ರ ಸರಸ್ವತೀ ಮಹಾಸ್ವಾಮಿ ಸಾನಿಧ್ಯ ವಹಿಸಿದ್ದರು. ಕೇಂದ್ರ ಸಚಿವ ಅನಂತ ಕುಮಾರ್‌ಸಮ್ಮೇಳನ ಉದ್ಘಾಟಿಸಿದ್ದರೆ ಪರಿಸರವಾಗಿ ಬಿ. ಕೃಷ್ಣಭಟ್ಟ ಅಧ್ಯಕ್ಷತೆ ವಹಿಸಿದ್ದರು. ದೇಶ ವಿದೇಶಗಳಿಂದ 25 ಸಾವಿರ ಪ್ರತಿನಿಧಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

- ಸಂಗಾತಿ

## ಪ್ರೀತಿಯ ನಿದೇಶಕರೆ ಇದು ನಿಜವಾಗಿ ನಡೆದ ವಿಷಯ

ಒಂದು ದಿನ ಗಂಡ ಹೆಣ್ಣ್ ಮತ್ತೆ ಕೂಸು ಮೈಸೂರಿಗೆ ಗೌಡ ಮೇಳಕ್ಕೆ ಹೋದೊ. ರಾತ್ರಿ ಬಸ್‌ಲಿ ಹೋಕನಾ ಎಲ್ಲಾ ಒಟ್ಟಿಗೆ ಕುದ್ದೊ ಮತ್ತೆ ಗಂಡ ಹಿಂದೆ ಸೀಟಿಗೆ ಹೆಣ್ಣ್‌ನ ಕೂಸನ ಬುಟ್ಟ್ ಹೋಗಿ ಕುದ್ದತ್ ಮತ್ತೆ ಒಬ್ಬ ಹೊರಟವರ ಕೂಸ್‌ನ ಎತ್ತಿ ಕಂಡ್ ಇಳ್ದ್ ಹೋಗೆ ಬಿಟ್ಟತ್. ಅವಳು ಒಳ್ಳ ಮರ್‌ಟದೆ ಆಗ ಅವಳ ಗಂಡ ಹಿಂದೆ ಕುದ್ದವಂಗೆ ವಿಷಯ ಗೊತ್ತಾಗಿ ಪೊಲೀಸರಿಗೆ ತಿಳಿಸಿದೆ. ನಂತರ ಹೆಣ್ಣ್ ಗಂಡ್ ಪೊಲೀಸ್ ಎಲ್ಲಾ ಸೇರಿ ಬಿಟ್ಟೋ. ಅಷ್ಟೊತ್ತಿಗೆ ಗಂಡ ಕಣ್ಣ್ ಬಿಡಕನ ಹೆಣ್ಣ್ ಎಳಿಬೇಗಾ 7 ಗಂಟೆಯಾದರು ಎಳಿಕೆ ಅತ್‌ಲೆತ್ತಾ ಕರಿತಾ ಉಟ್ಟು ಗಡ

(ಕನಸು)

ಸಂಗ್ರಹಣೆ : ಮಂಞಂಡ್ರ ಸುರಿ ಅಪ್ಪಣ, ಯವಕ ಪಾಡಿ

## "ದೊಡ್ಡ ಗೇಟ್"

ಒಮ್ಮೆ ಮಾಸ್ಟರ್ ಕ್ಲಾಸಿಲಿ ಇಂದ್ ಕೆಲವ್ ಪ್ರಶ್ನೆಗಳ್ಳ ಕೇಳ್ಳೆ ಎಲ್ಲವು ಸರಿಯಾಗಿ ಉತ್ತರ ಹೇಳಕ್ಕುತ ಹೇಳ್ತ್. ಅದಿಕ್ಕೆ ಮಕ್ಕ ಎಲ್ಲಾ ಸರಿಸಾರ್‌ತ ಹೇಳ್ದೊ. ಪ್ರಪಂಚಲಿ ಅತೀ ದೊಡ್ಡದಾದ ಗೇಟ್ ಯಾವ್ದತ ಕೇಳ್ತ್. ಅದಿಕ್ಕೆ ಮಕ್ಕ ಇಂಡಿಯಾ ಗೇಟ್, ಅಮೇರಿಕ ಗೇಟ್, ಟೋಲ್‌ಗೇಟ್, ಚಂಯ ಚಂಯ ಚೈನಾಗೇಟ್‌ತ್ ಹೇಳ್ತಿದ್ದೊ, ಅದರ್ನ ಕೇಳಿ ಮಾಸ್ಟರ್ ಹೇಳ್ತ್. ನಿಮ್ಮ ಉತ್ತರ ಯಾವ್ದ ಸರಿ ಇಲ್ಲೆತ. ಒಂದ್ ಹೈದ ನಂಗೆ ಗೊತ್ತು ಸಾರ್ ವಿಶ್ವದಲ್ಲಿ ಅತ್ಯಂತ ದೊಡ್ಡ ಗೇಟ್ "ಕೋಲ್‌ಗೇಟ್‌ತ" ಎದ್ದ್ ನಿಂತ್ ಹೇಳ್ತ್. ಹೆಂಗಟ್ಟು, ನೋಡಿ ಉತ್ತರ.

-ಬಾರನ ಮಮತ ಉಲ್ಲಾಸ್, ಮಡ್ಕೇರಿ

## ಏನ್ ಗತಿ

A ಮೂಟೆ:- ಈಗೀಗ ಈ ಹಾಳಾದ ಮನುಷ್ಯರ ರಕ್ತ ಹೀರಿಕ್ಕೆ ಬೇಜಾರಾದೆಪ್ಪ, ಪ್ರಾಣಿಗಳ ಬಳಿ ಹೋದೆ ಲೇಸು ಕಂಡದೆ.

B ಮೂಟೆ:-ಅದ್ಯಾಕೆ ಹಂಗೇಳೀಯಾ?

A ಮತ್ತೆ ನಮ್ಗೆಸ ಏಡ್ಸ್ ಬಂದರೆ ಏನು ಗತಿತ್?

-ಕೊಟ್ಟಕೇರಿಯನ ಉಷಾ, ಬಲಂಬೇರಿ.

# ಅನುಕರಣೀಯ ವ್ಯಕ್ತಿ ದಿ. ವಳಂಬ್ರ ಎಲ್ಯಂಣ ಗೌಡ

ಬೆಳ್ತಂಗಡಿ ತಾಲೂಕಿನ ಕಡಿರು ದ್ಯಾವರ ಗ್ರಾಮದಲ್ಲಿರುವ ಬಂಡಾಜೆ ಅರ್ಬಿ ಜಲಪಾತ ಇಂದಿಗೂ ಮಲೆನಾಡಿನ ಭವ್ಯ ರಮಣೀಯತೆಯನ್ನೂ ರುದ್ರ ಗಾಂಭೀರ್ಯವನ್ನೂ ಉಳಿಸಿಕೊಂಡಿದೆ. ಈ ಪ್ರಕೃತಿ ರಮ್ಯದ ಮಡಿಲಲ್ಲಿರುವ ಬಂಡಾಜೆಯ ವಳಂಬ್ರ ಮನೆತನವು ಇಂದು ಪ್ರಸಿದ್ಧವಾದರೂ ಹಿಂದೆ ಮಧ್ಯಮ ವರ್ಗದ ಕುಟುಂಬ. ತಂದೆ ದಿ. ಲಿಂಗಪ್ಪಗೌಡರು, ತಾಯಿ ದಿ. ವೆಂಕಮ್ಮನವರ ಪ್ರಥಮ ಪುತ್ರನಾಗಿ ಜನಿಸಿದ ವಲಂಬ್ರ ಎಲ್ಯಂಣ ಗೌಡರು ತನ್ನ ಹಿರಿತನದಿಂದ 'ದೊಡ್ಡ ಗೌಡರು ಎಂದು ಕರೆಯಲ್ಪಟ್ಟವರು. ಗೌಡರ ಜನನ 1909 ಫೆಬ್ರವರಿ ವಳಂಬ್ರ ಮನೆತನದಲ್ಲಿ ಎದ್ದು ಕಾಣುತ್ತಿರುವ ಉತ್ತಮ ಸಂಸ್ಕಾರಗಳು ಗೌಡರಿಗೆ ಪರಂಪರೆಯಿಂದಲೇ ಬಂದವುಗಳು. ನೂರು ವರ್ಷಗಳ ಹಿಂದೆಯೆ ವಳಂಬ್ರ ಮನೆಯಲ್ಲಿ ಗಣವಹನ, ಸತ್ಯ ನಾರಾಯಣ ಪೂಜೆ. ಉಳ್ಳಾಯ ಉಳ್ಳಾಲ್ತಿ. ಪೂಜೆ (ದುರ್ಗಾಪೂಜೆ) ಬ್ರಾಹ್ಮಣರಿಗೆ ದಾನದಕ್ಷಿಣೆ ಸಂತರ್ಪಣೆ ಇತ್ಯಾದಿ ವರ್ಷಂಪ್ರತಿ ನಡೆದು ಬರುತ್ತಿದ್ದುದು ಇಂದೂ ಚಾಚೂ ತತಪ್ಪದೆ ನಡೆದು ಬರುತ್ತಿದೆ. ದಾನ ಧರ್ಮ ಪರೋಪಕಾರಗಳು ಇಂದಿಗೂ ಈ ಕುಟುಂಬದ ಘನತೆಯನ್ನು ಹೆಚ್ಚಿಸಿದೆ.

'ಆಳಾಗಿ ದುಡಿ, ಅರಸಾಗಿ ಉಣ್ಣು ಎಂಬ ನಾಣ್ನುಡಿಯನ್ನು ಆಚರಣೆಗೆ ತಂದ ಗೌಡರು, ಸಾಂಪತ್ತಿಕ ಪ್ರಗತಿ ಸಾಧಿಸಿ. ಸಾರ್ವಜನಿಕರಿಂದ ಗೌರವಾದರಗಳನ್ನು ಪಡೆದಿದ್ದು. ಗೌಡರ ಯಶಸ್ಸಿನ ಗುಟ್ಟನ್ನು ಅವರಲ್ಲಿ ಪ್ರಶ್ನಿಸಿದರೆ "ದುರ್ವ್ಯಸನಗಳಾದ ಕುಡಿತ, ಜೂಜು, ದುಂದುಗಾರಿಕೆ, ಸೋಮಾರಿತನಕ್ಕೆ ಬಲಿಯಾಗದೆ ಕಠಿಣ ಪರಿಶ್ರಮದಿಂದ ಮಣ್ಣಿನ ಮಕ್ಕಳು ಮಣ್ಣಿನಲ್ಲೇ ಹೋರಾಟ ಮಾಡಿದರೆ ಭೂಮಿ ತಾಯಿಯು ಮೇಲಕ್ಕೆತ್ತಿಯೇ ಎತ್ತುತ್ತಾಳೆ." ಎನ್ನುವ ಗೌಡರು ಇಂದಿನ ಯುವ ಜನಾಂಗ ದುಶ್ಚಟಗಳಿಗೆ ಬಲಿಯಾಗಿ ದಾರಿ ತಪ್ಪುತ್ತಿರುವುದನ್ನು ಹೇಳುತ್ತಾ "ಹೀಗಾದರೆ ನಮ್ಮ ಸಮಾಜವು ಖಂಡಿತವಾಗಿಯೂ ಮೇಲೇರದು" ಎನ್ನುತ್ತಾರೆ. ಮೂವರು ಗಂಡು ಮಕ್ಕಳು, ಒಬ್ಬಳು ಪುತ್ರಿಯನ್ನು ಪಡೆದ ಎಲ್ಯಂಣ ಗೌಡ ದಂಪತಿಗಳನ್ನು ಆದರ್ಶ ಕುಟುಂಬ. 'ವಜ್ರದಂತೆ ಕಠಿಣ ಹೂವಿನಂತೆ ಮೃದು ಗೌಡರ ಹೃದಯ, ಗೌಡರ ಖಂಡತುಂಡ ಮಾತುಗಳು, ನೇರ ನಡೆನುಡಿ, ನಿರ್ದಾಕ್ಷಿಣ್ಯ ಪ್ರವೃತ್ತಿ, ಶಿಸ್ತು ಬದ್ಧವಾದ ಆಚಾರ ವಿಚಾರ, ವ್ಯವಹಾರಗಳು ಗೌರವದಿಂದ ತಲೆಯೆತ್ತಿ ಬಾಳುವ ಗುಣಗಳು ಅವರ ವ್ಯಕ್ತಿತ್ವಕ್ಕೆ ಅಪೂರ್ವ ಶೋಭೆ ತಂದಿವೆ. ಊರಿನಲ್ಲಿ ನಡೆಯುವ ಯಾವ ಸಭೆ ಸಮಾರಂಭಗಳೂ ಕ್ಲಪ್ತ ಕಾಲಕ್ಕೆ ಅಚ್ಚುಕಟ್ಟಾಗಿ ನಡೆಯಬೇಕು. ಅಲ್ಲಿ ತಾಳ ತಪ್ಪಿದರೆ, ಅಲ್ಲಿ ಗೌಡರಿದ್ದರೆ ಅವರ ಧನಿ ಸಿಡಿದೇ ಸಿಡಿಯುತ್ತದೆ. ಗೌಡರ ಮನೆ, ವಳಂಬ್ರ ಚಾವಡಿ ಒಂದು ರೀತಿಯ ನ್ಯಾಯಾಲಯ. ಗೌಡರ ನೇತೃತ್ವದಲ್ಲಿ ಕೋರ್ಟು ಕಛೇರಿಗಳಿಗೆ ಹೋಗದೆ ರಾಜಿ ಪಂಚಾಯಿತಿಯಲ್ಲಿ ಸೇರುವ ವ್ಯಾಜ್ಯ ವಿವಾದಗಳು ಹೆಚ್ಚಾಗಿ ಇಲ್ಲಿ ಮುಗಿಯುತ್ತದೆ. ಗೌಡರು ಆಧುನಿಕ ರಾಜಕಾರಣಿಯಲ್ಲಿ. ಬದಲಾಗಿ ಹಳೆಯ ಕಾಲದ ಗ್ರಾಮದ ಪಂಚಾಯಿತಿಯ ನ್ಯಾಯಾಧೀಶ.

ಬರೇ ಓದಿ ಬರೆಯುವುದನ್ನು ಶಾಲೆಯಲ್ಲಿ ಕಲಿತು ಬಯಲು ವಿಶ್ವ ವಿದ್ಯಾನಿಲಯದಲ್ಲಿ ತನ್ನ ಜ್ಞಾನಾನುಭವವನ್ನು ವಿಸ್ತರಿಸಿಕೊಂಡ ಗೌಡರು ವಾಸ್ತುಶಿಲ್ಪ ತಜ್ಞರೂ ಹೌದು. ಕೆರೆ, ಬಾವಿ, ಸಂಕ, ಕಟ್ಟಡ ಕೆಲಸಗಳಲ್ಲಿ ಕಲಿತ ಇಂಜಿನಿಯರುಗಳಲ್ಲೂ ಮೀರಿದ ಸ್ವಾನುಭವ ತನ್ನ ಗ್ರಾಮದ ಸರ್ವತೋಮುಖ ಅಭಿವೃದ್ಧಿಗೆ ದುಡಿದು ಊರಿಗೊಂದು ಶಾಲೆ ಸ್ಥಾಪಿಸಿ ವಿದ್ಯಾಕ್ಷೇತ್ರದಲ್ಲಿಯೂ ಕೊಡುಗೆಯಿತ್ತ ಹೆಗ್ಗಳಿಕೆ ಗೌಡರದ್ದು. ಸಹಕಾರಿ ಸಂಘದ ಪ್ರತಿನಿಧಿಯಾಗಿ ರೈತರ ಅಭಿವೃದ್ಧಿಗಾಗಿ ಸಾಕಷ್ಟು ದುಡಿದಿರುತ್ತಾರೆ. ಆಸ್ತಿಕರಾದ ಗೌಡರು 1968 ರಲ್ಲಿ ಗ್ರಾಮಕ್ಕೊಂದು ದೇವಸ್ಥಾನ ಕಟ್ಟಿಸಿ. ದೇಗುಲವು ಬರೇ ಆರಾಧನಾ ಕೇಂದ್ರವಾಗದೆ ಸಾಂಸ್ಕೃತಿಕ ಕಲಾ ಕೇಂದ್ರವಾಗಲೆಂದು ಮನಗಂಡು ದೇಗುಲದ ಪಕ್ಕದಲ್ಲೇ ಕಲ್ಯಾಣಮಂಟಪವೊಂದನ್ನು ಕಟ್ಟಿಸಿ, ಇದರಿಂದ ಊರಿನ ಸಭೆ ಸಮಾರಂಭಗಳಿಗೆ, ಜನಸಾಮಾನ್ಯರ ಕಾರ್ಯಕ್ರಮಗಳಿಗೆ ಹೆಚ್ಚು ಅನುಕೂಲ ಕಲ್ಪಿಸಿಕೊಟ್ಟಿರುತ್ತಾರೆ. ಶ್ರೀ ಲಕ್ಷ್ಮೀವೆಂಕಟೇಶ್ವರ ದೇವರ ಕೃಪಾ ಕಟಾಕ್ಷದಿಂದ, ಊರಿನ ಹತ್ತು ಹಲವರ ಸಹಕಾರದಿಂದ ವರ್ಷಂಪ್ರತಿ ಫೆಬ್ರವರಿ 21 ನೇ ತಾರೀಖಿನಂದು ದೇವಸ್ಥಾನದಲ್ಲಿ ಪ್ರತಿಷ್ಠಾಪನಾ ಮಹೋತ್ಸವ ಸಾಂಸ್ಕೃತಿಕ ಕಾರ್ಯಕ್ರಮ ನಡೆಸುತ್ತಾ ಬಂದಿದ್ದಾರೆ. ಕಲ್ಯಾಣ ಮಂಟಪದ ಉದ್ಘಾಟನಾ ಕಾರ್ಯವನ್ನು ನೆರವೇರಿಸಲು ಬಂದ ಆದಿಚುಂಚನಗಿರಿ ಮಠಾಧೀಶರಾದ ಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಗೌಡರ ವ್ಯಕ್ತಿತ್ವ ಕೈಗೊಂಡ ಕಾರ್ಯಗಳನ್ನು ಪ್ರಶಂಸಿಸುತ್ತಾ ತುಂಬಿ ಹರಸಿರುತ್ತಾರೆ.

ಶ್ರೀ ಕ್ಷೇತ್ರ ಧರ್ಮಸ್ಥಳದ ಧರ್ಮಾಧಿಕಾರಿ ರಾಜರ್ಷಿ ಡಾ। ವೀರೇಂದ್ರಹೆಗ್ಗಡೆಯವರೊಂದಿಗೆ ಉತ್ತಮ ಬಾಂಧವ್ಯ ಹೊಂದಿದ್ದ ವಳಂಬ್ರ ಎಲ್ಯಂಣ ಗೌಡರು ತಾಲ್ಲೂಕಿನ ಉತ್ತಮ ಕೃಷಿಕನೆಂದು ಹೆಸರು ಪಡೆದವರಲ್ಲಿ ಒಬ್ಬರು. ಕುಟುಂಬದ ಏಳಿಗೆಗೆ ಮಾತ್ರವಲ್ಲದೆ ಇಡೀ ಸಮಾಜದ ಅಭಿವೃದ್ಧಿಗೆ ಶ್ರಮಿಸಿದ ಇವರು ಪ್ರಶಂಸೆಗೆ ಪಾತ್ರರಾಗಿದ್ದಾರೆ. ಇಂತಹ ದೂರದೃಷ್ಟಿ ವ್ಯಕ್ತಿತ್ವವಿರುವ ಗಣ್ಯರೊಬ್ಬರನ್ನು ಹೊಂದಿದ್ದ ನಮ್ಮ ಗೌಡ ಸಮಾಜ ಫೆಬ್ರವರಿ 24 ನೇ ದಿನಾಂಕ 1995ರಿಂದ ಗೌಡರ ಮರಣದ ಬಳಿಕ ಬಡವಾದಂತಾಗಿದೆ. ಮನೆ ಕಟ್ಟಿ, ಸಮಾಜ ಕಟ್ಟಿ, ದೇಗುಲ ಕಟ್ಟಿದ ಗೌಡರ ಬದುಕು ದೊಡ್ಡ ಬದುಕು. ಸಾರ್ಥಕ ಬದುಕು.

ಬರಹ: ಶ್ರೀಮತಿ ಲೋಕೇಶ್ವರಿ ವಿನಯಚಂದ್ರ ಉಜಿರೆ



## ಹುತಾತ್ಮ ಅಮೆಮನೆ ಅಪ್ಪಾಜಿ ಪ್ರಕಾಶ್

ಜನನ: 22-5-1970 **ಚಿರಸ್ಮರಣೆ** ಮರಣ: 29-4-2001

ನನ್ನ ಮುದ್ದಿನ ಮಗ ಅಪ್ಪಿ (ಪ್ರಕಾಶ್) ಅರಳುವ ಮೊದಲೇ ಬಾಡಿಹೋದ ಹೂವಿನಂತೆ ಜೀವನದ ಸವಿಯನ್ನು ಅನುಭವಿಸುವ ಮೊದಲೇ ಆ ಭಗವಂತನಲ್ಲಿ ಐಕ್ಯವಾಗಿ ಒಂದು ವರುಷ ಕಳೆಯಿತು. ನಿನ್ನಾತ್ಮಕ್ಕೆ ಆ ಭಗವಂತನು ಅನುದಿನವು ಚಿರಶಾಂತಿಯನ್ನು ಕರುಣಿಸಲೆಂದು ದಿನ ಬೇಡುತ್ತಾ ಕಣ್ಣೀರು ಸುರಿಸುತ್ತಾ ನಿನ್ನ ನೆನಪಿನಲ್ಲೇ ಇರುವ ನಿನ್ನ ಪ್ರೀತಿಯ

ತಾಯಿ: ಪಾರ್ವತಿ, ಮಡಿಕೇರಿ (29225)

---



ದಿ। ಕಟ್ಟೆ ಮನೆ ಗಣಪತಿ (ಮಂಜು)

ಜನನ: 14-3-1961 **ಚಿರಸ್ಮರಣೆ** ಮರಣ: 17-4-1999

ಶಿಸ್ತಿನ ಸಿಪಾಯಿ ಆಗಿ 15 ವರ್ಷದ ದೇಶ ಸೇವೆ ಮಾಡಿ ಅಕಾಲ ಮರಣವನ್ನಪ್ಪಿದರು ಸಹ ಸದಾ ನಿಮ್ಮ ಪ್ರೀತಿಯ ವಾತ್ಸಲ್ಯ ಒಡನಾಟ ನಮ್ಮೆಲ್ಲರ ಮನಸ್ಸಿನಲ್ಲಿ ಚಿರಸ್ಥಾಯಿಯಾಗಿದೆ. ಪರಮಾತ್ಮನು ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಬೇಡುವೆವು.

ಪತ್ನಿ: ಕಟ್ಟೆಮನೆ ಸುಧಾ ಗಣಪತಿ
ಮಕ್ಕಳು: ಪ್ರರವೀಣ್ ಗಣಪತಿ, ಅಮೂಲ್ಯ ಗಣಪತಿ
ಪ್ರಕಟಣೆ: ತೇನನ ಅಶ್ವಿನಿ ರಾಜೇಶ್ ಮತ್ತು ತೇನನ ಸೋಮಣ್ಣ ರಾಜೇಶ್.

---



ದಿ। ಸೆಟ್ಟೀಜನ ಸುಬ್ಬಯ್ಯ, ರಂಗಸಮುದ್ರ

**8 ನೇ ವರ್ಷದ ಪುಣ್ಯ ಸ್ಮರಣೆ**

ನಿಧನ: 28-4-1994

ನಮ್ಮನಗಲಿ ಎಂಟು ವರ್ಷಗಳು ಕಳೆದರು ನೀವು ನೀಡಿದ ಮಾರ್ಗದರ್ಶನ ಒಡನಾಡಿ ಬೆಳೆದ ಚಲನವಲನ ನೆನಪು ನಮ್ಮ ಹೃದಯದಲ್ಲಿ ಹಸಿರಾಗಿ ಉಳಿದಿದೆ. ನಿಮ್ಮ ಹೃದಯಕ್ಕೆ ಸದಕಾಲ ಚಿರಶಾಂತಿಯನ್ನು ಆ ಭಗವಂತ ನೀಡಲಿ ಎಂದು ಹಾರೈಸುವ.

ಪತ್ನಿ: ಅಕ್ಕಮ್ಮ ಹಾಗೂ ಮಗಳಂದಿರು, ಅಳಿಯಂದಿರು ಮೊಮ್ಮಗ.

---



ದಿ। ತಡಿಯಪ್ಪನ ಪೂವಯ್ಯ

**ಚಿರಸ್ಮರಣೆ**

ಮರಣ: 5-5-1969

ನೀವು ನಮ್ಮನ್ನು ಅಗಲಿ 33 ವರ್ಷಗಳಿಗೂ ಹೆಚ್ಚು ಸಂವತ್ಸರಗಳು ಸಂದರೂ ಸಹ ನಿಮ್ಮ ಸವಿನೆನಪು ಸದಾ ನಮ್ಮ ಹೃದಯದಲ್ಲಿ ಉಳಿದಿದೆಯಲ್ಲದೆ ಸದಾ ನಿಮ್ಮ ಆಶೀರ್ವಾದ ನಮ್ಮ ಮೇಲೆ ಇರಲೆಂದು ಬಯಸುವ,

ಪತ್ನಿ: ಸಾಕಮ್ಮ, ಮಕ್ಕಳು, ಅಳಿಯಂದಿರು, ಸೊಸೆಯಂದಿರು, ಮೊಮ್ಮಕ್ಕಳು ಹಾಗೂ ಮರಿಮಕ್ಕಳು,
ಪ್ರಕಟಣೆ: ಟಿ. ಪಿ. ಕುಮಾರಜಯ, ಮೈಸೂರು. ಮತ್ತು ಸಂಸಾರ

---

**ಪೂಜ್ಯ ಹಿರಿಯರ ಚಿರಸ್ಮರಣೆ**



ದಿ। ಪಟ್ಟಡ ಕಾರ್ಯಪ್ಪ ಮುತ್ತಣ್ಣ
ಜನನ: 12-5-1905
ಮರಣ: 29-5-1986

ನೀವು ಕಾಲಕಂಡು ಸಾಕಷ್ಟು ಸಮಯ ಕಳೆದರು ಸದಾ ನಮ್ಮ ನೆನಪಿನಲ್ಲಿರುವಿರಿ. ನೀವು ನಮಗೆ ದಾರಿದೀಪವಾಗಿ ಸಂಗಾತಿಯನ್ನು ಹುಟ್ಟು ಹಾಕಲು ಪ್ರೇರೇಪಿಸಿದ್ದೀರಿ ಮತ್ತು ಕೈ ಹಿಡಿದು ಮುನ್ನಡೆಸುತ್ತಿದ್ದೀರಿ. ನಮ್ಮ ಸ್ಮೃತಿಪಟಲದಲ್ಲಿ ಅನುದಿನವು ನೆಲೆಸಿರುವ ನೀವು ಇಂದು ನಮ್ಮೆಲ್ಲರನ್ನು ಹರಸುವ ಪೂಜ್ಯರಾಗಿದ್ದೀರಿ.

ಮಕ್ಕಳು, ಸೊಸೆಯಂದಿರು, ಅಳಿಯಂದಿರು, ಮೊಮ್ಮಕ್ಕಳು,ಮರಿ ಮಕ್ಕಳು ಹಾಗೂ ಅಪಾರ ಬಂಧು ಬಳಗದವರು.

ಪ್ರಕಟಣೆ: ಪಟ್ಟಡ ಪ್ರಭಾಕರ, ಶೀಲಾಮಣಿ,ದೀಪಕ್, ನಿಶಾ.



ದಿ। ಪಟ್ಟಡ ನೀಲವ್ವ ಮುತ್ತಣ್ಣ
ಜನನ: 20-5-1919
ಮರಣ: 6-5-1974

Reg. No. KA/SK/MYS-88 Registered : 10-01-96 TCI Kar. 09592

## ಬದುಕಿನ ಯಶಸ್ಸಿನ ಹಾದಿಯಲ್ಲಿ ಸಿದ್ಧಿಸಿದ ಕರ್ಮಯೋಗಿ


ಕುರುಂಜಿ ವೆಂಕಟರಮಣ ಗೌಡ

17 ವರ್ಷದ ತಪಸ್ಸಿನ ಫಲ ಕಂಡ ಭಗೀರಥ ಪ್ರಯತ್ನದಿಂದ ತನ್ನಗ್ರಾಮೀಣ ಪ್ರದೇಶ ಸುಳ್ಯಕ್ಕೆ ಮೆಡಿಕಲ್ ಕಾಲೇಜು ಸ್ಥಾಪಿಸುವಲ್ಲಿ ಸಫಲರಾಗಿ ಸಿದ್ಧ ಪುರುಷರಾದ ಯುವ ಪೀಳಿಗೆಯ ಹಿತ ಚಿಂತಕರಾದ ಕರ್ಮಯೋಗಿ ಗೌಡರಗೌಡ ಶ್ರೀ ಕುರುಂಜಿ ವೆಂಕಟ್ರಮಣ ಗೌಡರಿಗೆ ಹಾಗೂ ಅವರ ಸಂಸಾರಕ್ಕೆ ಹೃತ್ಪೂರ್ವಕ ವಂದನೆಗಳು. ಕುಲದೇವ್ರು ವೆಂಕಟರಮಣ ಅವರಿಗೆ ಇನ್ನಷ್ಟು ಹೆಚ್ಚು ಶಕ್ತಿ, ಆಯಸ್ಸನ್ನು ನೀಡಲೆಂದು ಶುಭ ಹಾರೈಸುತ್ತೇವೆ.

ಪ್ರಕಟಣೆ: ಪಟ್ಟಡ ಪ್ರಭಾಕರ, ಹಾಗೂ ಸಂಸಾರ, ಮೈಸೂರು.

## ಅಭಿನಂದನೆಗಳು ಮತ್ತು ಶುಭ ಕಾಮನೆಗಳು



ಡಾ. ಶ್ರೀಮತಿ ಅಶ್ವಿನಿ ಮುಂಡೋಡಿ

(ಶ್ರೀಮತಿ/ಶ್ರೀ ಕುಕ್ಕನೂರು ಕೆ. ಸೋಮಣ್ಣ-ಕರಡಿಗೋಡುಗ್ರಾಮ) ಇವರ ಮಗಳು ಕೆನಡಾ ದೇಶದCalgary ವಿಶ್ವ ವಿದ್ಯಾನಿಲಯದಲ್ಲಿ Molecular parasitology ಎಂಬ ವಿಷಯದಲ್ಲಿ ಡಾಕ್ಟರೇಟ್(Ph.d) ಪದವಿಯನ್ನು ಪಡೆದಿರುತ್ತಾರೆ. ಅಲ್ಲದೆ, ಇವರು ಅಮೆರಿಕಾ ಸಂಯುಕ್ತ ಸಂಸ್ಥಾನದ (USA) "San-Antonia"ದಲ್ಲಿರುವ Texas Health Science Centre ನಲ್ಲಿ POST Doctoral Fellow ಆಗಿ ಸೇವೆ ಸಲ್ಲಿಸುವುದರ ಜತೆ ಉನ್ನತ ಅಧ್ಯಯನಕ್ಕಾಗಿ ತೆರಳುತ್ತಿರುವ ಈ ಸಂದರ್ಭದಲ್ಲಿ ಅವರಿಗೆ ಯಶಸ್ಸನ್ನು ಹಾಗೂ ಶುಭ ಕಾಮನೆಗಳನ್ನು ಕೋರುವ.

ಡಾ. ವಸಂತ್ ಮುಂಡೋಡಿ

ಶ್ರೀ ಕೆ. ಕೆ. ಸೋಮಣ್ಣ, ಶ್ರೀಮತಿ ಸಾವಿತ್ರಿ ಸೋಮಣ್ಣ, ಕು॥ ಹರಿಣಿ ಸೋಮಣ್ಣ ಮತ್ತು ಶ್ರೀಮತಿ ಗಾಯತ್ರಿ ಘನಶ್ಯಾಮ್.

## ಕೊಡಗು ಸಂಗಾತಿ ಚಂದದಾರರಿಗೆ ಎಚ್ಚರಿಕೆಯ ಕರೆಗಂಟೆ !!!

ಕೊಡಗು ಸಂಗಾತಿ ಪತ್ರಿಕೆಯ ಚಂದ ಹಣವು ಶೇಕಡ 85% ಕ್ಕಿಂತಲೂ ಹೆಚ್ಚು ಬಾಕಿ ಇರುವುದರಿಂದ ಪತ್ರಿಕೆ ನಡೆಸಲು ಅಸಮರ್ಥರಾಗಿದ್ದೇವೆ. ಬಾಕಿಯನ್ನು ಉಳಿಸಿಕೊಂಡು ನವೀಕರಿಸದೆ ಇರುವ ಚಂದದಾರರು, ಜಾಹಿರಾತುದಾರರು, ಈ ತಕ್ಷಣವೇ ಕಳುಹಿಸಿಕೊಡಬೇಕು. ಸಾಕಷ್ಟು ಬಾರಿ ಜ್ಞಾಪಿಸಿದ್ದೇವೆ. ಇಲ್ಲವಾದಲ್ಲಿ 1-7-2002 ರಿಂದ ಕೊಡಗು ಸಂಗಾತಿ ಪತ್ರಿಕೆಯನ್ನು "ನಿಲ್ಲಿಸುವ ಅನಿವಾರ್ಯತೆ" ಬಂದೊದಗಿದೆಯೆಂದು ಈ ಮೂಲಕ ಪ್ರಕಟಿಸುತ್ತಿದ್ದೇವೆ. ಚಂದದಾರರು ಮಾಮೂಲಿನಂತೆ ಚಂದಕಳ್ಸಿ ಸಹಕರಿಸುವುದು.

- ಸಂಪಾದಕಿ

## ಷಷ್ಟ್ಯಬ್ದ ಶುಭಾಶಯಗಳು


ಎನ್. ಎಸ್. ದೇವಿ ಪ್ರಸಾದ್
ಜನನ :27-4-1942

ರಾಜ್ಯ ಪ್ರಶಸ್ತಿ ವಿಜೇತ, ಸಮಾಜ ಚಿಂತಕ ಲೇಖಕ, ಸಹಕಾರಿ ದುರೀಣ, ಚಲನಚಿತ್ರ ನಿರ್ಮಾಪಕ, ಶಿಕ್ಷಣ ಪ್ರೇಮಿ ಹಿತಚಿಂತಕ, ರಂಗಕರ್ಮಿ, ಸಂಘಟಕ ಸ್ನೇಹಜೀವಿ, ಬುದ್ಧಿ ಜೀವಿ ಹಾಗೂ ಉತ್ತಮ ಕೃಷಿಕರು, ದಾನಿಗಳು ಆದ ಸಂಪಾಜೆಯ ಎನ್. ಎಸ್. ದೇವಿಪ್ರಸಾದರಿಗೆ ಮತ್ತು ಅವರ ಸಂಸಾರಕ್ಕೆ ನಮ್ಮ ಹಾರ್ದಿಕ ಶುಭಾಯಗಳು

ಪ್ರಕಟಣೆ : ಪಟ್ಟಡ ಪ್ರಭಾಕರ ಹಾಗೂ ಸಂಸಾರ, ಮೈಸೂರು

**Kodagu Sangathi** Kannada Fortnightly Edited, Published, Printed by **Pattada P. Sheelamani, Doddanna Buildings, Hunsur Road, Hinkal Post, Mysore-570017.**
☎ : **0821/404290.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.